CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಫೆಬ್ರವರಿ ೧೭, ೨೦೦೫ (ಮಾಘ ೨೮, ಶಕ ವರ್ಷ ೧೯೨೬) | ಸಂಚಿಕೆ ೭ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

**ಕಂದಾಯ ಸಚಿವಾಲಯ**

**ವಿಷಯ :** ಐ ಗೇಟ್ ಗ್ಲೋಬಲ್ ಸಲ್ಯೂಷನ್ಸ್ (ಲಿ), ಬೆಂಗಳೂರು ಇವರು ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಪಾವತಿ ಮಾಡುವ ಬಗ್ಗೆ ಮಾಹಿತಿ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 25 ಮುನೋಮು 2001, ದಿನಾಂಕ: 18.04.2001.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 25 ಮುನೋಮು 2001, ದಿನಾಂಕ: 18.04.2001.
3. ಐ ಗೇಟ್ ಗ್ಲೋಬಲ್ ಸಲ್ಯೂಷನ್ಸ್ (ಲಿ), ಬೆಂಗಳೂರು ರವರ ಪತ್ರ ಸಂಖ್ಯೆ: ಐಜಿಎಸ್ಎಲ್/ 03ಜೆ/09/2004, ದಿನಾಂಕ: 11.09.2004.
4. ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ: ಎಸ್‌ಟಿಪಿ 157/04-05, ದಿನಾಂಕ: 13.12.2004.

**ಪ್ರಸ್ತಾವನೆ:**

M/s Mascot Systems Ltd., ಬೆಂಗಳೂರು ಇವರಿಗೆ ಸಾಫ್ಟ್‌ವೇರ್ ಟೆಕ್ನಾಲಜಿ ಪಾರ್ಕ್ ಸ್ಥಾಪನೆಗಾಗಿ ಮೇಲೆ ಓದಲಾದ (1) ಮತ್ತು (2)ರಲ್ಲಿ ಸೂಚಿಸಿರುವ ಸರ್ಕಾರದ ಆದೇಶ ಮತ್ತು ಅಧಿಸೂಚನೆ ಅನ್ವಯ ಮುದ್ರಾಂಕ ಶುಲ್ಕದಲ್ಲಿ ಶೇ.100 ರಷ್ಟು ವಿನಾಯಿತಿ ಹಾಗೂ ನೋಂದಣಿ ಶುಲ್ಕದಲ್ಲಿ ಪ್ರತಿ 1,000/- ರೂ. ಮೌಲ್ಯಕ್ಕೆ ರೂ.1-00 ರಂತೆ ನೋಂದಣಿ ಫೀ ಪಾವತಿಸಲು ವಿನಾಯಿತಿ ನೀಡಲಾಗಿತ್ತು. ಅದರಂತೆ ಮೇಲ್ಕಂಡ ಸಂಸ್ಥೆಯವರು ಜಮೀನನ್ನು ನೋಂದಾಯಿಸಿಕೊಂಡಿರುತ್ತಾರೆ.

ಏತನ್ಮಧ್ಯೆ, M/s Mascot Systems Ltd., Bangalore ರವರು ಅವರ ನಾಮಾಂಕಿತವನ್ನು M/s Mascot Systems Ltd., ಬದಲಾಗಿ M/s I Gate Global Solutions Ltd., ಎಂಬುದಾಗಿ ರಿಜಿಸ್ಟ್ರಾರ್ ಆಫ್ ಕಂಪನೀಸ್, ಕರ್ನಾಟಕ, ಬೆಂಗಳೂರು ರವರಲ್ಲಿ ಬದಲಾಯಿಸಿಕೊಂಡು ಮೇಲೆ ಓದಲಾದ (3)ರ ಅವರ ಪತ್ರ ದಿನಾಂಕ: 11.09.2004ರಲ್ಲಿ ಕೆಲವೊಂದು ಕಾರಣಾಂತರಗಳಿಂದ ಉದ್ದೇಶಿತ ಜಮೀನನ್ನು ಇತರೆ ಇಚ್ಛೆಯುಳ್ಳ ಖರೀದಿದಾರರಿಗೆ ಮಾರಾಟ ಮಾಡುವುದಾಗಿ ತಿಳಿಸುತ್ತಾ, ಈ ಪ್ರಯುಕ್ತ ಈ ಹಿಂದೆ ಮೇಲೆ ಓದಲಾದ (1) ಮತ್ತು (2)ರ ಸರ್ಕಾರದ ಆದೇಶಗಳಲ್ಲಿ ನೀಡಲಾದ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ರಿಯಾಯಿತಿಗಳನ್ನು ಹಿಂತೆಗೆದುಕೊಂಡು, ಸದರಿ ಜಮೀನಿಗೆ ಪ್ರಸ್ತುತ ಜಾರಿಯಲ್ಲಿರುವ ಮಾರುಕಟ್ಟೆ ಬೆಲೆಗೆ ಅನುಗುಣವಾಗಿ ತಗಲುವ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಸರ್ಕಾರಕ್ಕೆ ಪಾವತಿಸಲು ಒಪ್ಪಿ ಈ ಕುರಿತು ಸರ್ಕಾರದ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ.

ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು ಮೇಲೆ ಓದಲಾದ (4)ರ ಪತ್ರದಲ್ಲಿ ಸಂಸ್ಥೆಯು ಪಡೆದ ವಿನಾಯಿತಿ/ ರಿಯಾಯಿತಿಯನ್ನು ಮರುಪಾವತಿಸಲು ಇಚ್ಛಿಸಿದ್ದರಿಂದ ಮೂರು ಪತ್ರಗಳಿಗೆ ಪತ್ರ ಬರೆದ ದಿನಾಂಕದಂದು ಇದ್ದ ಪ್ರಚಲಿತ ದರದಲ್ಲಿ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಪಾವತಿಸಿಕೊಂಡು ಕರ್ನಾಟಕ ಮುದ್ರಾಂಕ ಕಾಯಿದೆ 1957ರ ಕಲಂ 46ರ ಅನ್ವಯ ಹಾಗೂ ನೋಂದಣಿ ಕಾಯಿದೆ 1908ರ ಕಲಂ 80(ಎ) ಅನ್ವಯ ಮೂರು ಪತ್ರಗಳನ್ನು ದೃಢೀಕರಿಸಬಹುದೆಂದು ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 652 ಮುನೋಮು 2004, ಬೆಂಗಳೂರು, ದಿನಾಂಕ: 31ನೇ ಜನವರಿ, 2005**

ಸರ್ಕಾರವು ಪ್ರಸ್ತಾವನೆಯಲ್ಲಿಯ ವಿಷಯವನ್ನು ಪರಿಶೀಲಿಸಿ, ಈ ಹಿಂದೆ M/s Mascot Systems Ltd., Bangalore ರವರಿಗೆ ಈ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶ ಮತ್ತು ಕ್ರಮ ಸಂಖ್ಯೆ (2)ರ ಅಧಿಸೂಚನೆಯನ್ನು ನೀಡಲಾದ ವಿನಾಯಿತಿ ಮತ್ತು ರಿಯಾಯಿತಿ ಸೌಲಭ್ಯಗಳನ್ನು ಹಿಂದಕ್ಕೆ ಪಡೆಯಲಾಗಿದೆ. M/s I Gate Global Systems Ltd., Bangalore (ಈ ಮೊದಲಿಗೆ M/s Mascot

Systems Ltd., Bangalore) ರವರ ಕೋರಿಕೆಯನ್ನು ಪರಿಗಣಿಸಿ ಕರ್ನಾಟಕ ಮುದ್ರಾಂಕ ಕಾಯಿದೆ 1957ರ ಕಲಂ 46ರ ಅನ್ವಯ ಹಾಗೂ ನೋಂದಣಿ ಕಾಯಿದೆ 1908ರ ಕಲಂ 80 (ಎ)ರ ಅನ್ವಯ ಸದರಿ M/s I Gate Global Systems Ltd., (ಈ ಹಿಂದೆ M/s Mascot Systems Ltd., Bangalore) ರವರಿಂದ ಈ ಕೆಳಗೆ ಸೂಚಿಸಿರುವಂತೆ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕವನ್ನು ಪಡೆಯಲು ಸರ್ಕಾರವು ಆದೇಶಿಸಿದೆ.

| Sl. No. | Doc. No. | Market Value shown in the Document | Stamp Duty payable @ 13.5% | Regn. Fee already paid by M/s Mascot | Difference Regn. Fee to be paid now |
|---|---|---|---|---|---|
| 1 | 2 | 3 | 4 | 5 | 6 |
| 1. | 2368/01-02 Dated: 22.02.2001 | 1,77,11.496/- | 23,91,053/- | 17,712/- | 3,36,528/- |
| 2. | 2370/01-02 Dated: 25.05.2001 | 2,62,44,320/- | 35,43,008/- | 26,245/- | 4,98,655/- |
| 3. | 2340/01-02 Dated:25.05.2001 | 45,45,256/- | 6,13,643/- | 4,546/- | 86,374/- |

**ಮುದ್ರಾಂಕ ಶುಲ್ಕ 65,47,704/-+ನೋಂದಣಿ ಶುಲ್ಕ 9,21,557/-**

**ಒಟ್ಟು ರೂ.74,69,261/-**

M/s I Gate Global Solutions Ltd., Bangalore ರವರಿಂದ (ಮೊದಲಿಗೆ M/s Mascot Systems Ltd., ) ಮುದ್ರಾಂಕ ಶುಲ್ಕ ರೂ.65,47,704/- ಮತ್ತು ನೋಂದಣಿ ಶುಲ್ಕ ರೂ.9,21,557/- ಗಳನ್ನು ಒಟ್ಟು ರೂ.74,69,261/- (ಎಪ್ಪತ್ತನಾಲ್ಕು ಲಕ್ಷದ ಅರವತ್ತೊಂಬತ್ತು ಸಾವಿರದ ಇನ್ನೂರಾ ಅರವತ್ತೊಂದು ರೂಪಾಯಿಗಳು) ಪಡೆಯಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎನ್. ಶ್ರೀಮುಖಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್.158

**ವಿಷಯ :** ಬೆಳಗಾಂ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಶ್ರೀ ರೇಣುಕಾ ಯಲ್ಲಮ್ಮ ದೇವಸ್ಥಾನದ ಕಾರ್ಯನಿರ್ವಾಹಕ ಅಧಿಕಾರಿ ಹುದ್ದೆಗೆ ಕೆ.ಎ.ಎಸ್. ಆಯ್ಕೆ ಶ್ರೇಣಿ ಅಧಿಕಾರಿಯನ್ನು ನೇಮಕ ಮಾಡಿರುವುದರಿಂದ ಸದರಿ ಹುದ್ದೆಯನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ/ 43/ ಆಸೇವ/ 2004 ದಿನಾಂಕ: 14.09.2004.

2. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 236 ಮುಸೇವಿ 2004, ದಿನಾಂಕ: 16.09.2004.

**ಪ್ರಸ್ತಾವನೆ:**

ಬೆಳಗಾಂ ಜಿಲ್ಲೆ, ಸವದತ್ತಿ ತಾಲ್ಲೂಕು ಯಲ್ಲಮ್ಮ ಗುಡ್ಡದ ಶ್ರೀ ರೇಣುಕಾ ಯಲ್ಲಮ್ಮ ದೇವಸ್ಥಾನದಲ್ಲಿ ಖಾಲಿ ಇದ್ದ ಸಮೂಹ ಎ (ಕಿರಿಯ ಶ್ರೇಣಿ) ಅಧಿಕಾರಿ ವೃಂದದ ಕಾರ್ಯನಿರ್ವಾಹಕ ಅಧಿಕಾರಿ ಹುದ್ದೆಗೆ ರೂ.12,800-16,720ರ ವೇತನ ಶ್ರೇಣಿಯ ಕೆ.ಎ.ಎಸ್. (ಆಯ್ಕೆ ಶ್ರೇಣಿ) ವೃಂದಕ್ಕೆ ಸೇರಿದ ಶ್ರೀ ಕೆ.ಎಚ್. ಕಾಕನೂರು ರವರನ್ನು ನೇಮಿಸಲು ಸದರಿಯವರ ಸೇವೆಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 14.09.2004ರ ಅಧಿಸೂಚನೆಯಲ್ಲಿ ಸಿ.ಆ.ಸು. ಇಲಾಖೆಯು ಕಂದಾಯ ಇಲಾಖೆಯ ವಶಕ್ಕೆ ನೀಡಿತ್ತು. ಶ್ರೀ ಕೆ.ಎಚ್. ಕಾಕನೂರು ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ ಇವರನ್ನು ಶ್ರೀ ರೇಣುಕಾ ಯಲ್ಲಮ್ಮ ದೇವಿ ದೇವಸ್ಥಾನದಲ್ಲಿ ಖಾಲಿ ಇದ್ದ ಕಾರ್ಯನಿರ್ವಾಹಕ ಅಧಿಕಾರಿ ಹುದ್ದೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ: 16.09.2004ರ ಅಧಿಸೂಚನೆಯಲ್ಲಿ ಸ್ಥಳ ನಿಯುಕ್ತಿಗೊಳಿಸಿ, ನೇಮಿಸಿದೆ.

ಶ್ರೀ ಕೆ.ಎಚ್. ಕಾಕನೂರು ರವರು ರೂ.12,800-16,720ರ ವೇತನ ಶ್ರೇಣಿಯ ಕೆ.ಎ.ಎಸ್. (ಆಯ್ಕೆ ಶ್ರೇಣಿ) ವೃಂದಕ್ಕೆ ಸೇರಿದ ಅಧಿಕಾರಿಯಾಗಿರುವುದರಿಂದ, ಶ್ರೀ ರೇಣುಕಾ ಯಲ್ಲಮ್ಮ ದೇವಿ ದೇವಸ್ಥಾನದ ಕಾರ್ಯನಿರ್ವಾಹಕ ಅಧಿಕಾರಿ ಹುದ್ದೆಯಲ್ಲಿ ಸದರಿಯವರು ಕರ್ತವ್ಯ ನಿರ್ವಹಿಸುವವರೆಗೆ ಈ ಹುದ್ದೆಯನ್ನು ಕೆ.ಎ.ಎಸ್. (ಆಯ್ಕೆ ಶ್ರೇಣಿ) ವೃಂದಕ್ಕೆ ಉನ್ನತೀಕರಿಸಲು ಸರ್ಕಾರವು ತೀರ್ಮಾನಿಸಿದೆ. ಆದ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 236 ಮುಸೇವಿ 2004, ಬೆಂಗಳೂರು, ದಿನಾಂಕ: 27ನೇ ಜನವರಿ, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಕೆ.ಎಚ್. ಕಾಕನೂರು ಕೆ.ಎ.ಎಸ್. (ಆಯ್ಕೆ ಶ್ರೇಣಿ) ವೃಂದದ ಅಧಿಕಾರಿಯವರನ್ನು ಶ್ರೀ ರೇಣುಕಾ ಯಲ್ಲಮ್ಮ ದೇವಸ್ಥಾನದ ಸಮೂಹ ಎ (ಕಿರಿಯ ಶ್ರೇಣಿ) ವೃಂದದ ಕಾರ್ಯನಿರ್ವಾಹಕ ಅಧಿಕಾರಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿರುವಂತೆ, ಶ್ರೀ ಕೆ.ಎಚ್. ಕಾಕನೂರು ರವರು ಶ್ರೀ ರೇಣುಕಾ ಯಲ್ಲಮ್ಮ ದೇವಸ್ಥಾನದ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಪ್ರಭಾರ ವಹಿಸಿಕೊಂಡ ದಿನಾಂಕದಿಂದ ಸದರಿ ಹುದ್ದೆಯನ್ನು ರೂ.7,400-13,120ರ ವೇತನ ಶ್ರೇಣಿಯಿಂದ ರೂ.12,800-16,720ರ ವೇತನ ಶ್ರೇಣಿಗೆ ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಅಥವಾ ಶ್ರೀ ಕೆ.ಎಚ್. ಕಾಕನೂರು ರವರ ಸೇವೆಯು ಸದರಿ ಸಂಸ್ಥೆಗೆ ಅವಶ್ಯವಿರುವವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಉನ್ನತೀಕರಿಸಿ, ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ/1052/ವೆಚ್ಚ-7/2004 ದಿನಾಂಕ: 06.11.2004ರಲ್ಲಿ ನೀಡಿರುವ ಸಹಮತಿ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಟಿಪ್ಪಣಿ ಸಂಖ್ಯೆ: ಸಿಆಸುಇ/507/ಸೇನಿ-ಇ/2004, ದಿನಾಂಕ: 22.12.2004ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ).

ಪಿ.ಆರ್.159

**ತಿದ್ದುಪಡಿ**

**ಸಂಖ್ಯೆ: ಕಂಇ 411 ಮುನೋಮು 2002, ಬೆಂಗಳೂರು, ದಿನಾಂಕ: 17ನೇ ಜನವರಿ, 2005**

ಇದೇ ಸಮ ಸಂಖ್ಯೆಯ ಅಧಿಸೂಚನೆ ದಿನಾಂಕ: 03.12.2002 ರಲ್ಲಿನ 4ನೇ ಸಾಲಿನಲ್ಲಿ ನಮೂದಿಸಿರುವ "ಒಟ್ಟು 2,00,00,000-00"ರ ಬದಲಾಗಿ "ಒಟ್ಟು 1,00,00,000-00 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಎನ್. ಶ್ರೀಮುಖಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್.160

**ಶಿಕ್ಷಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಇಡಿ 205 ಡಿಜಿಓ 2004, ಬೆಂಗಳೂರು, ದಿನಾಂಕ: 22ನೇ ಜನವರಿ, 2005**

ಮುದ್ರಣ, ಲೇಖನಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಲೇಖನ ಸಾಮಗ್ರಿ ಮಳಿಗೆ ಬೆಂಗಳೂರು, ಇಲ್ಲಿ ಇರುವ ಒಂದು ಸಹಾಯಕ ನಿರ್ದೇಶಕರು (ತಾಂತ್ರಿಕೇತರ) ಹುದ್ದೆಯನ್ನು ಸರ್ಕಾರಿ ಶಾಖಾ ಮುದ್ರಣಾಲಯ, ತುಮಕೂರು, ಇಲ್ಲಿಗೆ ಸ್ಥಳಾಂತರಿಸಿದೆ ಹಾಗೂ ಸರ್ಕಾರಿ ಮುದ್ರಣಾಲಯ, ಪೀಣ್ಯ ಶೆಡ್, ಬೆಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಶಿವರಾಮಯ್ಯ ಸಹಾಯಕ ನಿರ್ದೇಶಕರು (ತಾಂತ್ರಿಕೇತರ) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರಿ ಶಾಖಾ ಮುದ್ರಣಾಲಯ, ತುಮಕೂರು ಇಲ್ಲಿಗೆ ವರ್ಗಾಯಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು 1,2).

ಪಿ.ಆರ್.161

**ವಿಷಯ :** ಶ್ರೀ ಎಂ. ವಿಜಯಕುಮಾರ್, ಹಿಂದಿನ ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ದುಗ್ಗನಹಳ್ಳಿ, ಮಳವಳ್ಳಿ ತಾಲ್ಲೂಕ್, ಮಂಡ್ಯ ಜಿಲ್ಲೆ, ಇವರು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 18 ರಡಿ ಸಲ್ಲಿಸಿರುವ ಮೇಲ್ಮನವಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**
1. ದಿನಾಂಕ: 06.07.2004ರ ಸರ್ಕಾರಿ ಆದೇಶ ಸಂಖ್ಯೆ: ಇಡಿ 146 ಡಿಜಿಡಿ 2002.
2. ಶ್ರೀ ಎಂ. ವಿಜಯಕುಮಾರ್, ದಿನಾಂಕ: 07.08.2004ರ ಮೇಲ್ಮನವಿ.

**ಪ್ರಸ್ತಾವನೆ:**

ಶ್ರೀ ಎಂ. ವಿಜಯಕುಮಾರ್, ಮುಖ್ಯಶಿಕ್ಷಕರು, ಇವರು ಹಿಂದೆ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ದುಗ್ಗನಹಳ್ಳಿ ಸರ್ಕಾರಿ ಪ್ರೌಢಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಶಾಲೆಗೆ ಗೈರುಹಾಜರಾದ, ಹಾಜರಾತಿ ವಹಿಯಲ್ಲಿ ಸಾಂದರ್ಭಿಕ ರಜೆ ನಮೂದಿಸಿ, ಅದನ್ನು ಉಪಯೋಗಿಸಿಕೊಂಡು, ನಂತರ ಬ್ಲೇಡಿನಿಂದ ಅಳಿಸಿ ರಜಾದ ಅವಧಿಗೆ ಸರಿ ಮಾಡಿದ, ಶ್ರೀ ಹೆಚ್.ಎಸ್. ಅಶ್ವಥ ಎಂಬ ಶಿಕ್ಷಕರು ಅನಧಿಕೃತ ಗೈರುಹಾಜರಾಗಿದ್ದ ವಿಷಯವನ್ನು ಮೇಲಾಧಿಕಾರಿಗಳಿಗೆ ವರದಿ ಮಾಡದೆ ಇದ್ದ ಆರೋಪಗಳ ಹಿನ್ನೆಲೆಯಲ್ಲಿ ಸಿಸಿಎ ನಿಯಮ 11 ರಡಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣೆಯಲ್ಲಿ ಆಪಾದನೆಗಳು ಸಾಬೀತಾದ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 06.07.2004ರ ಆದೇಶದಲ್ಲಿ ಅವರನ್ನು ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿತ್ತು. ಸದರಿ ದಂಡನಾದೇಶದ ವಿರುದ್ಧ ಶ್ರೀ ಎಂ. ವಿಜಯಕುಮಾರ್ ಇವರು ಸಿಸಿಎ ನಿಯಮ 18 ರಡಿ ಮಾನ್ಯ ರಾಜ್ಯಪಾಲರಿಗೆ ಮೇಲ್ಮನವಿಯನ್ನು ಸಲ್ಲಿಸಿ ಈ ಕೆಳಕಂಡ ಅಂಶಗಳನ್ನು ಪ್ರಸ್ತಾಪಿಸಿದ್ದಾರೆ.

1. The Enquiry officer has violated procedure laid down under Rule 11 of KCS (CCA) Rules 1957. The Enquiry Report is drafted in such a way, that it gives impression and misleads any reader, that the Appellant has unconditionally pleaded guilty to the charges. His unauthorized absence was actually due to a severe Scooter accident, that he had met with during the relevant time, as a result of which his right leg severely fractured and he suffered injuries all over the body including his head. The Enquiry Officer was aware of the scooter accident and has personally seen the medical certificate and prescriptions.

The Enquiry Officer has omitted to mention in his report about scooter accident for which the Appellant remained un-authorisedly absent. As such the procedure prescribed under Rule 11 of CCA Rules has been violated. The Disciplinary Authority has also failed by accepting the enquiry report which is null and void.

2. The entire inquiry was held and completed within one hour. Thus, sufficient opportunity was not afforded to the Appellant to defend himself effectively and properly.

3. The Enquiry Officer has failed to follow the mandatory procedure i.e. directing the Presenting Officer to summon his witnesses with relevant documents to prove the charges against the Appellant. The Presenting Officer was a silent spectator to the proceedings.

Documents mentioned in Annexure-III of Article of charges are not marked as Exhibits/ documentary evidence during the enquiry, through witnesses by the Presenting Officer.

4. The Appellant was denied opportunity of seeking the assistance of a defence counsel.

ಶ್ರೀ ಎಂ. ವಿಜಯಕುಮಾರ್, ಅವರು ಮೇಲ್ಕಂಡ ಅಂಶಗಳನ್ನು ಪ್ರಸ್ತಾಪಿಸುತ್ತಾ ತನಗೆ ವಿಧಿಸಿರುವ ದಂಡನೆಯು ವಿಚಾರಣೆಯಲ್ಲಿ ಸಾಬೀತಾದ ಆರೋಪದ ಪ್ರಮಾಣಕ್ಕಿಂತ ಹೆಚ್ಚಾಗಿದೆ ಎಂದು ತಿಳಿಸಿ ತನಗೆ ವಿಧಿಸಿರುವ ದಂಡನೆಯನ್ನು ರದ್ದುಗೊಳಿಸಿ Denovo or a fresh enquiry ನಡೆಸುವಂತೆ ಕೋರಿರುತ್ತಾರೆ.

ಘನತೆವೆತ್ತ ರಾಜ್ಯಪಾಲರು ಶ್ರೀ ಎಂ. ವಿಜಯಕುಮಾರ್, ಅವರು ಸಲ್ಲಿಸಿರುವ ಮೇಲ್ಮನವಿಯನ್ನು ದಾಖಲೆಯೊಂದಿಗೆ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದ್ದಾರೆ.

"I have considered the appeal filed by Sri M. Vijayakumar, Former Headmaster, Govt. High School, Chicknayakana Halli, Krishnaraja Nagara Tq. Mysore District, against the orders of Government as Disciplinary Authority imposing the penalty of Dismissal from Service vide order No. ED 146 DGD 2002, dated 6th July 2004. I have considered the appeal in the light of the contentions made in the appeal, the appeal records and the connected Inquiry Records.

As verified from the inquiry records, the appellant has stated that he met with a severe scooter accident and was taking treatment and therefore he could not attend the duties from 1st August 1997 to 11th December 1998. He has also stated that he had submitted the leave applications with Medical certificates. It is not clear whether the leave had been refused when the request was received and whether he was recalled for duty. This point has not been discussed in the Inquiry Report.

The witnesses listed in the Annexure-4 in the charges have not been examined and the appellant has not been allowed to cross examine which are mandatory as per Rule 11 (14) of KCS (CCA) Rules, Also the written defence statement has not been obtained from the AGO by the Inquiry Officer in the beginning of the inquiry as required under Rule 11(9). The Presenting Officer's argument on the appellant's reply has not been discussed in the Inquiry report. The Inquiry has been completed in one day itself obviously in a hurry, without summoning the witnesses, which is against the principle of natural justice.

Since there are charges other than unauthorized absence, K.P.S.C. should have been consulted before taking a decision.

In view of this, I am of the opinion that proper inquiry following the prescribed procedure has not been conducted into the charges against the appellant by the inquiry officer. I therefore allow the appeal and set aside the orders of Government imposing the penalty of dismissal on Sri M. Vijayakumar, former Head Master and remand the case back to Government for fresh Inquiry and disposal in accordance with law and rules on the subject.

Sd/-
**T.N. CHATURVEDI**
Governor of Karnataka.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 117 ಡಿಜಿಡಿ 2004, ಬೆಂಗಳೂರು, ದಿನಾಂಕ: 24ನೇ ಜನವರಿ, 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಂ. ವಿಜಯಕುಮಾರ್, ಹಿಂದಿನ ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ದುಗ್ಗನಹಳ್ಳಿ, ಮಳವಳ್ಳಿ ತಾಲ್ಲೂಕ್, ಮಂಡ್ಯ ಜಿಲ್ಲೆ, ಇವರನ್ನು ಸರ್ಕಾರಿ ಆದೇಶ ಸಂಖ್ಯೆ: ಇಡಿ 146 ಡಿಜಿಡಿ 2002 ದಿನಾಂಕ: 06.07.2004ರ ಮೂಲಕ ಸೇವೆಯಿಂದ ವಜಾ ಮಾಡಿ ವಿಧಿಸಿದ ದಂಡನೆಯ ಆದೇಶವನ್ನು ವಿಚಾರಣೆಗೆ ಕಾದಿರಿಸಿ, ತಳ್ಳಿಹಾಕಿ, ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಗೆ ಪುನರ್ ಸ್ಥಾಪಿಸಿ, ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕು, ತಟ್ಟಹಳ್ಳಿ, ಸರ್ಕಾರಿ ಪ್ರೌಢಶಾಲೆಯಲ್ಲಿ ಖಾಲಿ ಇರುವ ಮುಖ್ಯ ಶಿಕ್ಷಕರ ಹುದ್ದೆಗೆ ನೇಮಿಸಲಾಗಿದೆ.

ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ವಿಚಾರಣೆಯಲ್ಲಿ ಲೋಪವಾದ ಹಂತಗಳನ್ನು ಗಮನದಲ್ಲಿರಿಸಿಕೊಂಡು ಸದರಿಯವರ ವಿರುದ್ಧವಾಗಿ ಮಾಡಿದ ಆರೋಪಗಳಿಗೆ ಹೊಸದಾಗಿ ಸೂಚನಾ ಪತ್ರವನ್ನು ಜಾರಿ ಮಾಡುವ ಹಂತದಿಂದ ಹೊಸದಾಗಿ ವಿಚಾರಣೆ ನಡೆಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2).

ಪಿ.ಆರ್.162

**ವಿಷಯ :** ಶ್ರೀ ಅಮೃತ ಬೆಟ್ಟದ, ಪ್ರಾಂಶುಪಾಲರು, ಡಯಟ್, ಕುಮಟಾ ಉತ್ತರ ಕನ್ನಡ ಜಿಲ್ಲೆ, ಹಿಂದಿನ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೀದರ್ ಇವರ ಮೇಲಿನ ಆರೋಪಗಳಿಗೆ ಶಿಸ್ತಿನಕ್ರಮ -ಅಂತಿಮ ಆದೇಶ.

**ಓದಲಾಗಿದೆ :**
1. ಸೂಚನಾ ಪತ್ರ ಸಂಖ್ಯೆ: ಇಡಿ 17 ಡಿಜಿಡಿ 2004 ದಿನಾಂಕ: 29.05.2004.
2. ಶ್ರೀ ಅಮೃತ ಬೆಟ್ಟದ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 19.06.2004.

**ಪ್ರಸ್ತಾವನೆ:**

ಬೀದರ್ ಜಿಲ್ಲೆಯ ಹುಮ್ನಾಬಾದ್ ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀಮತಿ ನಿರ್ಮಲ ಬೆಳಕೇರಿ ಹಾಲಿ ಉಪನ್ಯಾಸಕರು, ಸಿ.ಟಿ.ಇ. ಗುಲ್ಬರ್ಗಾ ಇವರ ಮೇಲಿನ ಆರೋಪಗಳಿಗೆ ಅವರು ಆರೋಪಣಾ ಪಟ್ಟಿಗೆ ನೀಡಿದ್ದ ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಪರಿಶೀಲಿಸಿ ಅದಕ್ಕೆ ಪೂರಕವಾದ ದಾಖಲೆಗಳೊಂದಿಗೆ ಸ್ಪಷ್ಟ ಅಭಿಪ್ರಾಯವನ್ನು ನಿಗದಿಪಡಿಸಿರುವ ದಿನಾಂಕದೊಳಗೆ ಸರ್ಕಾರಕ್ಕೆ ಸಲ್ಲಿಸುವಂತೆ ಬೀದರ್

ಉಪನಿರ್ದೇಶಕರಾಗಿದ್ದ ಶ್ರೀ ಅಮೃತಬೆಟ್ಟದ ಇವರಿಗೆ ಸೂಚಿಸಲಾಗಿತ್ತು. ನಿಗದಿತ ಅವಧಿಯೊಳಗೆ ಅಪೇಕ್ಷಿತ ಮಾಹಿತಿಯನ್ನು ಸಲ್ಲಿಸದೇ ಇದ್ದಾಗ ನೆನಪೋಲೆಯನ್ನೂ ಸಹ ಕಳುಹಿಸಿದ್ದರೂ ಸಹ ವರದಿಯನ್ನು ಸಲ್ಲಿಸದೇ ಇದ್ದರಿಂದ ಕರ್ತವ್ಯ ನಿರ್ಲಕ್ಷ್ಯತೆಯ ಆರೋಪದ ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ 29.05.2004ರಲ್ಲಿ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 12 (1) (ಎ) ಅಡಿಯಲ್ಲಿ ಆರೋಪಣಾ ಪಟ್ಟಿಯನ್ನು ಸೂಚನಾ ಪತ್ರದ ಮೂಲಕ ಜಾರಿಗೊಳಿಸಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು.

ಆಪಾದಿತರಾದ ಶ್ರೀ ಅಮೃತ ಬೆಟ್ಟದ ಇವರು ದಿನಾಂಕ: 19.06.2004ರಂದು ಸಲ್ಲಿಸಿರುವ ಪ್ರತಿರಕ್ಷಣಾ ಹೇಳಿಕೆಯಲ್ಲಿ ಸರ್ಕಾರದ ಸೂಚನೆಯಂತೆ ಉಪನಿರ್ದೇಶಕರ ಕಛೇರಿಯ ನಾಲ್ಕು ಸಿಬ್ಬಂದಿಗಳನ್ನು ಹುಮ್ನಾಬಾದ್ ತಾಲ್ಲೂಕಿನ ಬಿ.ಇ.ಓ. ಕಛೇರಿಗೆ ನಿಯೋಜಿಸಿ ಶ್ರೀಮತಿ ನಿರ್ಮಲ ಬೆಳಕೇರಿ ಇವರ ಮೇಲಿನ ಆರೋಪಗಳಿಗೆ ಸಂಬಂಧಿಸಿದ ದಾಖಲೆ ಮತ್ತು ಮಾಹಿತಿಗಳನ್ನು ಪಡೆಯಲು ಕ್ರಮ ಕೈಗೊಳ್ಳಲಾಗಿತ್ತೆಂದೂ ಹಾಗೂ ಅದಕ್ಕೆ ಸಂಬಂಧಿಸಿದ ಅಭಿಪ್ರಾಯ ಮತ್ತು ದಾಖಲೆಗಳನ್ನು ಒಂದು ವಾರದೊಳಗಾಗಿ ಸರ್ಕಾರಕ್ಕೆ ಒಪ್ಪಿಸುವುದಾಗಿ ವಿನಂತಿಸಿ, ಆಪಾದನೆ ಕೈಬಿಡುವಂತೆ ಕೋರಿದ್ದರು.

ಶ್ರೀ ಅಮೃತ ಬೆಟ್ಟದ ಇವರು ಅಭಿಪ್ರಾಯವನ್ನು ದಿನಾಂಕ: 24.06.2004ರಂದು ಸಲ್ಲಿಸಿದ್ದು ಇವುಗಳನ್ನು ಸುಮಾರು ಒಂಭತ್ತು ತಿಂಗಳು ವಿಳಂಬ ಮಾಡಿ ಅಭಿಪ್ರಾಯ ನೀಡಿದ್ದಾರೆ. ಸದರಿಯವರಿಗೆ ಈ ರೀತಿ ಇನ್ನು ಮುಂದೆ ವಿಳಂಬ ಆಗದಂತೆ ನೋಡಿಕೊಳ್ಳಲು ಎಚ್ಚರಿಕೆ ನೀಡುವುದು ಸೂಕ್ತವೆಂದು ಸರ್ಕಾರವು ನಿರ್ಧರಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 17 ಡಿಜಿಡಿ 2004, ಬೆಂಗಳೂರು, ದಿನಾಂಕ: 22ನೇ ಜನವರಿ, 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಅಮೃತ ಬೆಟ್ಟದ, ಪ್ರಾಂಶುಪಾಲರು ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಕುಮಟಾ, ಉತ್ತರಕನ್ನಡ ಜಿಲ್ಲೆ ಇವರ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ಇನ್ನು ಮುಂದೆ ವಿಳಂಬ ಆಗದಂತೆ ಹಾಗೂ ಈ ರೀತಿಯ ಪ್ರಕರಣಗಳು ಮರುಕಳಿಸದಂತೆ ನೋಡಿಕೊಳ್ಳಲು "ಎಚ್ಚರಿಕೆ" ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2).

ಪಿ.ಆರ್.163

**ವಿಷಯ :** ಶ್ರೀ ಹೆಚ್.ಪಿ. ಕುಲಕರ್ಣಿ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬೆಳಗಾಂ, ಇವರ ಮೇಲಿನ ಆರೋಪಗಳಿಗೆ ಶಿಸ್ತು ಕ್ರಮ-ಅಂತಿಮ ಆದೇಶ.

**ಓದಲಾಗಿದೆ :**
1. ಸೂಚನಾ ಪತ್ರ ಸಂಖ್ಯೆ: ಇಡಿ 46 ಡಿಜಿಡಿ 2002, ದಿನಾಂಕ: 19.10.2002.
2. ಶ್ರೀ ಕುಲಕರ್ಣಿ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 02.11.2002.
3. ಸರ್ಕಾರಿ ಆದೇಶ ಸಂಖ್ಯೆ: ಇಡಿ 46 ಡಿಜಿಡಿ 2002 ದಿನಾಂಕ: 20.01.2003 ಹಾಗೂ 22.04.2003.
4. ವಿಭಾಗೀಯ ಕಾರ್ಯದರ್ಶಿ, ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ, ಹಾಗೂ ಸಹನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾಂ ವಿಭಾಗ, ಬೆಳಗಾಂ ಹಾಗೂ ವಿಚಾರಣಾಧಿಕಾರಿ ಇವರ ವರದಿ ಸಂಖ್ಯೆ: ಎ3-ಆರೋಪ, ವಿಚಾರಣೆ-HPK- ಉಪನ್ಯಾಸಕ-ಡಯಟ್-ಬಿ-90-02-03:1605 ದಿನಾಂಕ: 05.07.2003.
5. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಡಿ 46 ಡಿಜಿಡಿ 2002 ದಿನಾಂಕ 31.05.2004.
6. ಶ್ರೀ ಹೆಚ್.ಪಿ. ಕುಲಕರ್ಣಿ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 30.06.2004.

**ಪ್ರಸ್ತಾವನೆ:**

ಶ್ರೀ ಹೆಚ್.ಪಿ. ಕುಲಕರ್ಣಿ, ಹಿರಿಯ ಉಪನ್ಯಾಸಕರು, ಡಯಟ್ ಬೆಳಗಾಂ, ಇವರು ಈ ಹಿಂದೆ ಜಮಖಂಡಿಯಲ್ಲಿರುವ ಸಿಟಿಇ ನಲ್ಲಿ ಉಪನ್ಯಾಸಕರಾಗಿ ಕಾಯನಿರ್ವಹಿಸುತ್ತಿದ್ದಾಗ ಈ ಕೆಳಕಂಡ ಆರೋಪಗಳಿಗೆ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11ರ ಮೇರೆಗೆ ಆರೋಪಣಾ ಪಟ್ಟಿಯನ್ನು ಸೂಚನಾ ಪತ್ರದ ಮೂಲಕ ಜಾರಿಗೊಳಿಸಿ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು.

**ಆರೋಪ-1**

ಬಿಜಾಪುರ ಕುಟುಂಬ ನ್ಯಾಯಾಲಯವು ಓ.ಎಸ್. ನಂ.8/96 ರಲ್ಲಿ ದಿನಾಂಕ: 09.03.2000ರಂದು ನೀಡಿರುವ ತೀರ್ಪಿನನ್ವಯ ಫಿರ್ಯಾದಿಯಾದ ಅವರ ಪತ್ನಿ ಶ್ರೀಮತಿ ರಮಾಬಾಯಿಯವರಿಗೆ ರೂ.1,33,268/-ಗಳನ್ನು ಸಂದಾಯ ಮಾಡಿರುವುದಿಲ್ಲ. ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸಿರುವ ಆರೋಪದ ಮೇರೆಗೆ execution case No.36/2000 ದ ಮೇಲೆ ನಿಮ್ಮನ್ನು ದಿನಾಂಕ: 20.07.2001ರೊಳಗೆ ನ್ಯಾಯಾಲಯಕ್ಕೆ ಹಾಜರುಪಡಿಸಲು ವಾರೆಂಟ್ ಹೊರಡಿಸಿರುತ್ತಾರೆ. ನ್ಯಾಯಾಲಯದ ತೀರ್ಪನ್ನು ಪಾಲಿಸದೆ ಕರ್ತವ್ಯಚ್ಯುತಿ ಎಸಗಿರುವುದು.

**ಆರೋಪ-2**

ಕುಟುಂಬ ನ್ಯಾಯಾಲಯದ ಪತ್ರ ಸಂಖ್ಯೆ: ಸಿಬ್ಬಂದಿ ಕೋರ್ಟ್ 1/2000-01 ದಿನಾಂಕ: 26.06.2001ರಂತೆ ದಿನಾಂಕ: 26.06.2001ರಂದು ಅಪರಾಹ್ನ ಕರ್ತವ್ಯದಿಂದ ಬಿಡುಗಡೆ ಹೊಂದಿದ್ದು, ನ್ಯಾಯಾಲಯದಲ್ಲಿ ಹಾಜರಾಗಿ ಪುನಃ ಕರ್ತವ್ಯದ ಮೇಲೆ ತೆರಳಲು ನ್ಯಾಯಾಲಯದಿಂದ ಯಾವ ಆದೇಶವಾಗಲಿ ಅಥವಾ ಅನುಮತಿ ಪತ್ರವಾಗಲಿ ಪಡೆದು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಮತ್ತು ನ್ಯಾಯಾಲಯದಲ್ಲಿ ನಿಮ್ಮ ವಿರುದ್ಧ ಹೂಡಿದ್ದ ಕೇಸ್ ಬಗ್ಗೆ ಪ್ರಾಂಶುಪಾಲರಿಗೆ: ಇಲಾಖೆಗೆ: ಸರ್ಕಾರಕ್ಕಾಗಲೀ ಯಾವ ಮಾಹಿತಿ ನೀಡಿರುವುದಿಲ್ಲ. ಆದಾಗ್ಯೂ ಸಹ ನೀವು ದಿನಾಂಕ: 27.06.2001ರಿಂದ ಈವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತೀರಿ. ಈ ಮೂಲಕ ಕೆಸಿಎಸ್ಆರ್ ನಿಯಮ 108ರ ರೀತ್ಯ ಶಿಸ್ತುಕ್ರಮಕ್ಕೆ ಅರ್ಹರಾಗಿರುತ್ತೀರಿ.

**ಆರೋಪ-3**

ದಿನಾಂಕ: 14.06.2001ರಿಂದ ಸೆಪ್ಟೆಂಬರ್ 2001ರ ಮಾಹೆಯವರೆಗೆ ಅನಧಿಕೃತ ಗೈರು ಹಾಜರಾಗಿದ್ದರೂ ಸಹ ಜಮಖಂಡಿ ಉಪಖಜಾನೆಯಿಂದ ರೂ.44,031/-ಗಳನ್ನು ಡ್ರಾ ಮಾಡಿ ದುರುಪಯೋಗಪಡಿಸಿಕೊಂಡು ಸರ್ಕಾರಕ್ಕೆ ಆರ್ಥಿಕ ನಷ್ಟ ಮಾಡುವ ಮೂಲಕ ಕರ್ತವ್ಯಚ್ಯುತಿ ಎಸಗಲು ಕಾರಣರಾಗಿರುತ್ತೀರಿ.

ಆಪಾದಿತರು ಮೇಲೆ ಓದಲಾದ ಕ್ರಮಾಂಕ (2)ರಲ್ಲಿನ ಪತ್ರದ ಮೂಲಕ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ ಆರೋಪಗಳನ್ನು ಅಲ್ಲಗಳೆದಿದ್ದರಿಂದ ಮೇಲೆ ಓದಲಾದ ಕ್ರಮಾಂಕ (3)ರಲ್ಲಿನ ಸರ್ಕಾರಿ ಆದೇಶಗಳ ಮೂಲಕ ವಿಭಾಗೀಯ ಕಾರ್ಯದರ್ಶಿ, ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ಮತ್ತು ಸಹನಿರ್ದೇಶಕರು, ಸಾಶೀಇ, ಬೆಳಗಾಂ, ಇವರನ್ನು ವಿಚಾರಣಾಧಿಕಾರಿಯಾಗಿಯೂ, ಹಾಗೂ ರೀಡರ್ ಸಿಟೀಇ, ಬೆಳಗಾಂ, ಇವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು. ವಿಚಾರಣಾಧಿಕಾರಿಗಳು ದಿನಾಂಕ: 05.07.2003ರಂದು ವಿಚಾರಣಾ ವರದಿ ಸಲ್ಲಿಸಿದ್ದಾರೆ. ವಿಚಾರಣಾ ವರದಿಯಂತೆ ಆರೋಪ-1ಕ್ಕೆ ಸಂಬಂಧಿಸಿದಂತೆ ಶ್ರೀ ಕುಲಕರ್ಣಿ ಇವರು ಕುಟುಂಬ ನ್ಯಾಯಾಲಯದ ತೀರ್ಪಿನ ಪ್ರಕಾರ ರೂ.1,31,268 ಗಳನ್ನು ತಮ್ಮ ಪತ್ನಿಗೆ ನ್ಯಾಯಾಲಯದ ತೀರ್ಪಿನಂತೆ ಸಂದಾಯ ಮಾಡದೇ ಇರುವ ಆರೋಪ ಸಾಬೀತಾಗಿದೆ ಎಂದು, ಆರೋಪ-2ಕ್ಕೆ ಸಂಬಂಧಿಸಿದಂತೆ ಆಪಾದಿತರು ದಿನಾಂಕ: 26.06.2001ರಂದು ಕರ್ತವ್ಯದಿಂದ ಬಿಡುಗಡೆ ಹೊಂದಿ ನ್ಯಾಯಾಲಯದಲ್ಲಿ ಹಾಜರಾಗಿ ಪುನಃ ಕರ್ತವ್ಯಕ್ಕೆ ಹಾಜರಾಗಲು ನ್ಯಾಯಾಲಯದಿಂದ ಯಾವ ಆದೇಶ ಪಡೆದಿರುವುದಿಲ್ಲ. ಹಾಗೂ ಸಂಬಂಧಿಸಿದವರಿಗೆ ಮಾಹಿತಿ ನೀಡಿಲ್ಲದಿರುವುದರಿಂದ ಈ ಆರೋಪ ಸಾಬೀತಾಗಿದೆ ಎಂದು ಹಾಗೂ ಆರೋಪ-3 ಕ್ಕೆ ಸಂಬಂಧಿಸಿದಂತೆ ಶ್ರೀ ಕುಲಕರ್ಣಿ ಇವರು ದಿನಾಂಕ: 14.06.2001ರಿಂದ ಕರ್ತವ್ಯದಿಂದ ಹೊರಗುಳಿದಿದ್ದಾರೆ. ಆದರೂ ಸಹ ಸೆಪ್ಟೆಂಬರ್ 2001ರ ತಿಂಗಳವರೆಗೆ ವೇತನವನ್ನು ಜಮಖಂಡಿ ಉಪಖಜಾನೆಯಿಂದ ರೂ.44,031/- ಪಡೆದುಕೊಂಡಿದ್ದಾರೆ. ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾದ ಅವಧಿಗೆ ಸಂಬಳವನ್ನು ಕೆಎಫ್‌ಸಿ 1958ರ ಅನುಚ್ಛೇದ 99(ಎ)ರಲ್ಲಿನ ನಿಯಮ ಉಲ್ಲಂಘಿಸಿ, ವೇತನ ಪಡೆದಿರುವ ಆರೋಪ ಸಾಬೀತಾಗಿದೆ ಎಂದು ವಿಚಾರಣಾಧಿಕಾರಿಗಳು ನಿರ್ಣಯಿಸಿದ್ದರಿಂದ ಆಪಾದಿತರಿಗೆ ದಿನಾಂಕ: 31.05.2004ರ 2ನೇ ಕಾರಣ ಕೇಳುವ ನೋಟೀಸ್‌ನೊಂದಿಗೆ ವಿಚಾರಣಾ ವರದಿಯನ್ನು ಜಾರಿಗೊಳಿಸಿ ವಿಚಾರಣಾ ವರದಿಯಲ್ಲಿನ ನಿರ್ಣಯದ ಬಗ್ಗೆ ರಕ್ಷಣಾ ಹೇಳಿಕೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು.

ಶ್ರೀ ಹೆಚ್.ಪಿ. ಕುಲಕರ್ಣಿ ಇವರು ದಿನಾಂಕ: 30.06.2004ರಂದು ಕೆಳಗಿನಂತೆ ಪ್ರತಿರಕ್ಷಣಾ ಹೇಳಿಕೆ ಸಲ್ಲಿಸಿ ಅವರ ಮೇಲಿನ ಆರೋಪಗಳನ್ನು ಅಲ್ಲಗಳೆದಿದ್ದಾರೆ.

**ಆರೋಪ-1**

ನನ್ನ ಬದುಕು ತಿಂಗಳ ಸಂಬಳದ ಮೇಲೆಯೇ ಅವಲಂಬಿತವಾಗಿದೆ ನ್ಯಾಯಾಲಯದ ತೀರ್ಪಿನನ್ವಯ ರೂ. 54,000/-ಗಳನ್ನು ತುಂಬಲಾಗಿದ್ದು ಉಳಿದ ಮೊತ್ತವನ್ನು ವೇತನ ಬಿಡುಗಡೆಯಾದ ನಂತರ 2 ಕಂತುಗಳಲ್ಲಿ ತುಂಬಲಾಗುವುದೆಂದು ನ್ಯಾಯಾಲಯಕ್ಕೆ ತಿಳಿಸಿರುತ್ತೇನೆ.

**ಆರೋಪ-2**

ನ್ಯಾಯಾಲಯದ ಆದೇಶವನ್ನು ಸಿಟೀಇ ಪ್ರಾಂಶುಪಾಲರು ತಪ್ಪಾಗಿ ಅರ್ಥೈಸಿಕೊಂಡಿದ್ದಾರೆ. ಕೋರ್ಟಿಗೆ ಹಾಜರಾಗಿ ನ್ಯಾಯಾಲಯದಿಂದ ಹಾಜರಾತಿ ಪ್ರಮಾಣ ಪತ್ರ ತಂದುಕೊಟ್ಟರೂ ಪ್ರಾಂಶುಪಾಲರು ಒಪ್ಪಿಲ್ಲ.

**ಆರೋಪ-3**

ಸಿಟೀಇ ಪ್ರಾಂಶುಪಾಲರು ದಿನಾಂಕ: 26.06.2001ರಂದು ನ್ಯಾಯಾಲಯದ ತೀರ್ಪಿನ ಮೇಲೆ ಬಿಡುಗಡೆ ಮಾಡಿದ್ದಾರೆ. ದಿನಾಂಕ: 25.06.2001ರ ವೇತನ ಬಿಲ್ಲನ್ನು ಮಾಡಿ ಖಜಾನೆಗೆ ಕಳುಹಿಸಿದ್ದೆ ಆಗ ನಾನು ಸ್ವತಂತ್ರ ವೇತನ ತೆಗೆದುಕೊಳ್ಳುವ ಅಧಿಕಾರ ಹೊಂದಿದ್ದೆ ಆ ಪ್ರಕಾರ ಮಹಾಲೇಖಪಾಲರು ಬೆಂಗಳೂರು, ಇವರು ನನಗೆ ವೇತನ ಪಟ್ಟಿ ಹಾಗೂ ಅದರಲ್ಲಿಯ ಅವಧಿ ನಮೂದಿಸಿದಂತೆ ನಾನು ವೇತನ ತೆಗೆದುಕೊಂಡಿದ್ದೇನೆ. ನಾನು ಕಾಲೇಜಿಗೆ ಕೆಲಸಕ್ಕೆ ಬಂದರೂ ಅವರು ನನಗೆ ಹಾಜರಿ ಪುಸ್ತಕದಲ್ಲಿ ಸಹಿ ಮಾಡದಿರಲು ಸೂಚಿಸಿದರು. ಕಾರಣ ಮೇಲಾಧಿಕಾರಿಗಳ ಆದೇಶವನ್ನು ಮನ್ನಿಸಿ ಸುಮ್ಮನಿರಬೇಕಾಯಿತು.

ಆಪಾದಿತರು ಸಲ್ಲಿಸಿದ್ದ ರಕ್ಷಣಾ ಹೇಳಿಕೆ ಹಾಗೂ ವಿಚಾರಣಾ ವರದಿಯಲ್ಲಿನ ನಿರ್ಣಯ ಹಾಗೂ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ಆಪಾದಿತರು ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತವಾಗಿ ವೇತನ ರೂ.44,031/-ಗಳನ್ನು ಡ್ರಾ ಮಾಡಿ ಸರ್ಕಾರಕ್ಕೆ ಆರ್ಥಿಕ ನಷ್ಟವನ್ನುಂಟು ಮಾಡಿರುವುದು ಸಾಬೀತಾಗಿದೆ. ಸದರಿಯವರ ಎಲ್ಲಾ 3 ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿದ್ದರಿಂದ ವಿಚಾರಣಾ ವರದಿಯಲ್ಲಿನ ನಿರ್ಣಯವನ್ನು ಸರ್ಕಾರವು ಸಂಪೂರ್ಣವಾಗಿ ಒಪ್ಪಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 46 ಡಿಜಿಡಿ 2002, ಬೆಂಗಳೂರು, ದಿನಾಂಕ: 20ನೇ ಜನವರಿ, 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಹೆಚ್.ಪಿ. ಕುಲಕರ್ಣಿ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಬೆಳಗಾಂ, ಇವರಿಗೆ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 8 (iii )ರ ಮೇರೆಗೆ ಸರ್ಕಾರವು ಅವರ ಮುಂದಿನ ಎರಡು (2) ವಾರ್ಷಿಕ ಮುಂಬಡ್ತಿ ವೇತನವನ್ನು ಸಂಚಿತ ಪರಿಣಾಮ ಬೀರದಂತೆ (without cumulative effect) ತಡೆ ಹಿಡಿದು ಆದೇಶಿಸಿದೆ. ಹಾಗೂ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತವಾಗಿ ಪಡೆದ ವೇತನ ಮೊತ್ತ ರೂ.44,031/-ನ್ನು (ನಲವತ್ತನಾಲ್ಕು ಸಾವಿರದ ಮೂವತ್ತೊಂದು ರೂಪಾಯಿಗಳು ಮಾತ್ರ) ವೇತನದಿಂದ ವಸೂಲಿ ಮಾಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2).

ಪಿ.ಆರ್.164

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ವೈ. ಕೃಷ್ಣಪ್ಪ, ಎಪಿಸಿ 2267, ಸಿಎಆರ್ (ದಕ್ಷಿಣ) ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ :**

1. ಸಹಾಯಕ ಪೊಲೀಸ್ ಕಮೀಷನರ್ (ಆಡಳಿತ) ನಗರ ಸಶಸ್ತ್ರ ಮೀಸಲು ಪಡೆ (ದಕ್ಷಿಣ) ಬೆಂಗಳೂರು ಇವರ ಆದೇಶ ಸಂಖ್ಯೆ: ತಕ್ಷೀರು 41:ಎಸಿಪಿ-1: ಆಡಳಿತ: 2001-02 ದಿನಾಂಕ: 18.01.02.
2. ಉಪ ಪೊಲೀಸ್ ಕಮೀಷನರ್ ಸಶಸ್ತ್ರ ಮೀಸಲು ಪಡೆ (ದಕ್ಷಿಣ) ಬೆಂಗಳೂರು ಇವರ ಆದೇಶ ಸಂಖ್ಯೆ: 172: ಪನ್ವಿ: ಅಪೀಲು: 2002-03 ದಿನಾಂಕ: 31.08.02.
3. ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿ ದಿನಾಂಕ: 24.03.2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು: 2: 22:04 ದಿನಾಂಕ: 25.09.2004.

**ಪ್ರಸ್ತಾವನೆ:**

ಶ್ರೀ ವೈ. ಕೃಷ್ಣಪ್ಪ, ಎಪಿಸಿ 2267, ಸಿಎಆರ್ (ದಕ್ಷಿಣ) ಬೆಂಗಳೂರು ಇವರ ವಿರುದ್ಧ ದಿನಾಂಕ: 07.08.2001 ರಿಂದ 05.12.2001ರ ವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾದ ಆಪಾದನೆಯ ಬಗ್ಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ. ಈ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನು ಪಡೆದ ಶಿಸ್ತು ಪ್ರಾಧಿಕಾರಿಯವರು ಹಾಗೂ ಸಹಾಯಕ ಪೊಲೀಸ್ ಕಮೀಷನರ್ (ಆಡಳಿತ) ಸಿಎಆರ್ (ದಕ್ಷಿಣ) ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 18.01.2002ರ ಆದೇಶದಲ್ಲಿ ಅರ್ಜಿದಾರರ ಮೂರು (3) ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮವಾಗಿ ಮುಂದೂಡಿರುತ್ತಾರೆ. ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಯಾವುದೇ ಸತ್ಯಾಂಶ ಹಾಗೂ ಸಕಾರಣಗಳಿಲ್ಲವೆಂದು ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿಸಿಪಿ, ಸಿಎಆರ್ (ದಕ್ಷಿಣ) ಬೆಂಗಳೂರು ಇವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 31.08.2002ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣಾ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದು, ಇಲಾಖಾ ರಜಾ ನಿಯಮಾವಳಿಗಳನ್ನು ಹಾಗೂ ನಿಯಮ 195, 189 ಕೆಸಿಎಸ್‌ಆರ್ ಅನ್ನು ಉಲ್ಲಂಘನೆ ಮಾಡಿ, ಸಾರ್ವಜನಿಕ ಹಿತದೃಷ್ಟಿಯ ಕರ್ತವ್ಯಗಳನ್ನು ಬದಿಗೊತ್ತಿ ಇವರ ಇಚ್ಛಾನುಸಾರ ಕರ್ತವ್ಯಕ್ಕೆ ವಿಮುಖರಾಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ, ಬೇಜವಾಬ್ದಾರಿತನ ಮತ್ತು ಅಶಿಸ್ತನ್ನು ತೋರಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಹಾಗೂ ಇವರು ಒಬ್ಬ ಹವ್ಯಾಸಿ ಗೈರುಹಾಜರಿ ಪ್ರವೃತ್ತಿಯುಳ್ಳವರೆಂದು, ತಮ್ಮ ಸೇವಾ ಅವಧಿಯಲ್ಲಿ 26 ಶಿಕ್ಷಾ ಪಟ್ಟಿಗಳನ್ನು ಹೊಂದಿರುವುದರಿಂದ, ಮತ್ತು ಇವರಿಗೆ ಲಘು ದಂಡನೆಗಳನ್ನು ವಿಧಿಸಿ ತಿಳುವಳಿಕೆಯನ್ನು ನೀಡಿದ್ದರೂ ಸಹ ತಮ್ಮ ಚಾಳಿಯಿಂದ ಸುಧಾರಿಸಿಲ್ಲವೆಂದು ಕಂಡು ಬರುತ್ತಿದೆ. ಈ ಹಿನ್ನೆಲೆಯಲ್ಲಿ, ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಲು ಸಾಧ್ಯವಿರುವುದಿಲ್ಲವೆಂದು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 75 ಪೊಸಿಅ 2004, ಬೆಂಗಳೂರು, ದಿನಾಂಕ: 11ನೇ ಜನವರಿ, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೈ. ಕೃಷ್ಣಪ್ಪ, ಎಪಿಸಿ 2267 ಸಿಎಆರ್ (ದಕ್ಷಿಣ) ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ರಂಗಮಣಿ**
ಪಿ.ಆರ್.165
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಲೋಕೋಪಯೋಗಿ ಸಚಿವಾಲಯ

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ ಬಿ.ಎಂ. ರಸ್ತೆಯಿಂದ ಚೀಲೂರು-ಚಿಕ್ಕಕಲ್‌ಬಾಳ್-ಬೆಳಗುಳಿ-ಅಂಗರಹಳ್ಳಿ- ಲಿಂಗೇಗೌಡನದೊಡ್ಡಿ- ಅರಟಬೆಲೆ-ದೊಡ್ಡಮುದವಾಡಿ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ಎಇ-8:ಬೆಂವಿ. ಕನಕಪುರ ರಸ್ತೆ ಮೇಲ್ದರ್ಜೆ ಪ್ರಸ್ತಾವನೆ: 2004-05, ದಿನಾಂಕ: 16.10.04.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ ಬಿ.ಎಂ. ರಸ್ತೆಯಿಂದ ಚೀಲೂರು-ಚಿಕ್ಕಕಲ್‌ಬಾಳ್-ಬೆಳಗುಳಿ-ಅಂಗರಹಳ್ಳಿ-ಲಿಂಗೇಗೌಡನದೊಡ್ಡಿ- ಅರಟಬೆಲೆ-ದೊಡ್ಡಮುದವಾಡಿ ಒಟ್ಟು 5 ಕಿಮೀ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 137 ಸಿಆರ್‌ಎಂ 2004, ಬೆಂಗಳೂರು, ದಿನಾಂಕ: 27ನೇ ಜನವರಿ, 2005**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರ ತಾಲ್ಲೂಕಿನ ಬಿ.ಎಂ. ರಸ್ತೆಯಿಂದ ಚೀಲೂರು-ಚಿಕ್ಕಕಲ್‌ಬಾಳ್-ಬೆಳಗುಳಿ-ಅಂಗರಹಳ್ಳಿ-ಲಿಂಗೇಗೌಡನದೊಡ್ಡಿ- ಅರಟಬೆಲೆ- ದೊಡ್ಡಮುದವಾಡಿ ಒಟ್ಟು 5 ಕಿಮೀ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶೇಖ್ ಅಬ್ದುಲ್ ವಾಜಿದ್**
ಪಿ.ಆರ್.166
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸಂಪರ್ಕ).

## ಕಾರ್ಮಿಕ ಸಚಿವಾಲಯ

**ವಿಷಯ :** ಡಾ: ಭುವನೇಶ್ವರಿ ಜೆ. ಆಯುರ್ವೇದ ವೈದ್ಯರು (ದರ್ಜೆ-2) ಇವರ ಸೇವೆಯನ್ನು ಕಾರಾವಿ ಯೋ (ವೈ) ಸೇವೆಗಳು ಇಲಾಖೆಯಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಡಾ: ಭುವನೇಶ್ವರಿ ಜೆ. ಆಯುರ್ವೇದ ವೈದ್ಯರು (ದರ್ಜೆ-2) ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು, ದಿನಾಂಕ: 24.09.2003ರ ಮನವಿ.
2. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ವೈದ್ಯರು 367:2003-04, ದಿನಾಂಕ: 07.11.2003.

**ಪ್ರಸ್ತಾವನೆ:**

ಡಾ: ಭುವನೇಶ್ವರಿ ಜೆ. ಆಯುರ್ವೇದ ವೈದ್ಯರು ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು ಇವರು (ನಿಯೋಜನೆ ಮೇಲೆ) ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಮನವಿಯಲ್ಲಿ ಕಾರಾವಿ ಯೋ (ವೈ) ಸೇವೆಗಳು ಇಲಾಖೆಯಲ್ಲಿ ವಿಲೀನಗೊಳಿಸಲು ಕೋರಿರುತ್ತಾರೆ.

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರು ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ವರದಿ ಮಾಡುತ್ತಾ ಡಾ: ಭುವನೇಶ್ವರಿ ಜೆ. ಆಯುರ್ವೇದ ವೈದ್ಯರು (ದರ್ಜೆ-2) ಇವರು ಭಾರತೀಯ ವೈದ್ಯಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ಸೇವೆಗೆ ಸೇರಿದವರಾಗಿದ್ದು ಪ್ರಸ್ತುತ ಇವರು ಕಾರಾವಿ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು ಇಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿದ್ದಾರೆಂದೂ ಇವರ ಕಾರ್ಯನಿರ್ವಹಣೆಯು ಉತ್ತಮವಾಗಿದ್ದು ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲವೆಂದೂ ಹಾಗೂ ಇಲಾಖಾ ವಿಚಾರಣೆ ನಡೆಸಲು ಉದ್ದೇಶಿಸಿರುವುದಿಲ್ಲವೆಂದು ಸದರಿಯವರ ಪರಿವೀಕ್ಷಣಾ ಅವಧಿಯು ತೃಪ್ತಿಕರವೆಂದು ಘೋಷಿಸಲಾಗಿದ್ದು ಹುದ್ದೆಗೆ ನಿಗದಿಪಡಿಸಲಾದ ಇಲಾಖಾ ಪರೀಕ್ಷೆಗಳಲ್ಲಿಯೂ ಸಹ ಉತ್ತೀರ್ಣರಾಗಿರುವುದಾಗಿ ತಿಳಿಸಿರುತ್ತಾರೆ.

ಡಾ: ಭುವನೇಶ್ವರಿ ಜೆ. ಇವರನ್ನು ಅವರ ಮಾತೃ ಇಲಾಖೆಗೆ ಹಿಂತಿರುಗಿಸಿದಲ್ಲಿ ಆಯುರ್ವೇದಿಕ್ ವೈದ್ಯರೇ ಇಲ್ಲದೆ ವಿಮಾ ರೋಗಿಗಳಿಗೆ ತೊಂದರೆ ಉಂಟಾಗುವುದರಿಂದ ವಿಮಾ ರೋಗಿಗಳ ಹಿತ ದೃಷ್ಟಿಯಿಂದ ಈ ವೈದ್ಯರ ಸೇವೆಯನ್ನು ಕಾರಾವಿ ಯೋಜನೆ (ವೈ) ಸೇವೆಗಳು ಇಲಾಖೆಯಲ್ಲಿ ವಿಲೀನಗೊಳ್ಳುವ ದಿನಾಂಕದಿಂದ ಸೇವಾ ಜೇಷ್ಠತೆಯನ್ನು ನೀಡುವ ನಿಬಂಧನೆಗೊಳಪಟ್ಟು ಇವರ ಸೇವೆಯನ್ನು ವಿಲೀನಗೊಳಿಸಲು ನಿರ್ದೇಶಕರು ಕೋರಿರುತ್ತಾರೆ. ಡಾ: ಭುವನೇಶ್ವರಿ ಜೆ. ಇವರ ಸೇವೆಗಳನ್ನು ಕಾರಾವಿ ಯೋ (ವೈ) ಸೇವೆಗಳು ಇಲಾಖೆಯಲ್ಲಿ ಖಾಯಂ ಆಗಿ ವಿಲೀನಗೊಳಿಸಲು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ಸಹ ತನ್ನ ಸಹಮತಿ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 436 ಎಲ್ಎಸ್ಐ 2003, ಬೆಂಗಳೂರು, ದಿನಾಂಕ: 25ನೇ ಜನವರಿ, 2005**

ನಿರ್ದೇಶಕರು, ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಭಾರತೀಯ ವೈದ್ಯಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ಸೇವೆಗೆ ಸೇರಿದ ಡಾ: ಭುವನೇಶ್ವರಿ ಜೆ. ಆಯುರ್ವೇದ ವೈದ್ಯರು (ದರ್ಜೆ-2) ಇವರ ಸೇವೆಗಳನ್ನು 1977ರ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳ ನಿಯಮ 16 (ಎ) (ii)ರನ್ವಯ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯ ಆಯುರ್ವೇದ ವೈದ್ಯರು ದರ್ಜೆ-2 ಹುದ್ದೆಯಲ್ಲಿ ವಿಲೀನಗೊಳಿಸಿ ಕಾರ್ಮಿಕ ರಾಜ್ಯ ವಿಮಾ ಆಸ್ಪತ್ರೆ, ಇಂದಿರಾನಗರ, ಬೆಂಗಳೂರು ಇಲ್ಲಿಗೆ ತಕ್ಷಣದಿಂದ ಜಾರಿಗೆ ಬರುವಂತೆ ನೇಮಿಸಲಾಗಿದೆ.

1. ಸದರಿ ವೈದ್ಯರ ಜೇಷ್ಠತೆಯನ್ನು ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇಲಾಖೆಯಲ್ಲಿ ಹಾಲಿ ಸೇವೆ ಸಲ್ಲಿಸುತ್ತಿರುವ ಆಯುರ್ವೇದ ವೈದ್ಯರು (ದರ್ಜೆ-2) ಜೇಷ್ಠತಾ ಪಟ್ಟಿಯ ಅತಿ ಕೆಳಭಾಗದಲ್ಲಿ ನಿಗದಿಪಡಿಸುವುದು.

2. ಮೇಲ್ಕಂಡ ಷರತ್ತನ್ನು ಒಪ್ಪಿಕೊಂಡಿರುವುದಕ್ಕೆ ಡಾ: ಭುವನೇಶ್ವರಿ ಜೆ. ಇವರಿಂದ ಮುಚ್ಚಳಿಕೆ ಪತ್ರವನ್ನು ನಿರ್ದೇಶಕು ಕಾರ್ಮಿಕ ರಾಜ್ಯ ವಿಮಾ ಯೋಜನೆ (ವೈ) ಸೇವೆಗಳು ಇವರು ಪಡೆಯುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ವಿಶ್ವನಾಥ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು).

ಪಿ.ಆರ್.167

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** 2004-2005 ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ಎರಡನೇ ಕಂತಿನ ರಾಜ್ಯದ ಪಾಲಿನ ಹಣವನ್ನು ಬಾಗಲಕೋಟೆ, ಚಿತ್ರದುರ್ಗ, ಗುಲ್ಬರ್ಗ ಜಿಲ್ಲಾ ಪಂಚಾಯತ್ ಗಳಿಗೆ ಬಿಡುಗಡೆ ಮಾಡುವ (ಶೇ.25ರಷ್ಟು ಹಂಚಿಕೆ) ಬಗ್ಗೆ.

**ಉಲ್ಲೇಖ:**
1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: ಆರ್ 17014: 12: 2004 ಡಿಆರ್‌ಡಿಎ (ಎಸ್‌ಆರ್ ನಂ. 20) ದಿನಾಂಕ 28.04.2004.
2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 5 ಸ್ವಜಯೋ (ಡಿಆರ್‌ಡಿಎ) 04 ದಿ: 22-05-2004.
3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್17014 / 12 / 2004 ಡಿಆರ್‌ಡಿಎ (ಎಸ್‌ಆರ್ ನಂ. 107) ದಿನಾಂಕ 21-12-2004.

**ಪ್ರಸ್ತಾವನೆ:**

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ 2004-05 ನೇ ಸಾಲಿಗೆ ಒಂದನೇ ಕಂತಿನ ಹಣ ಅನುಕ್ರಮವಾಗಿ ರೂ.5,10,68,000 ಗಳನ್ನು ಹಾಗೂ 1,70,23,000ಗಳನ್ನು ಬಿಡುಗಡೆ ಮಾಡಿವೆ. ಕೇಂದ್ರ ಸರ್ಕಾರ ಈಗ ಬಾಗಲಕೋಟೆ, ಚಿತ್ರದುರ್ಗ ಮತ್ತು ಗುಲ್ಬರ್ಗ ಜಿಲ್ಲೆಗಳಿಗೆ ಒಟ್ಟು ರೂ. 43,91,000 ಗಳನ್ನು ಬಿಡುಗಡೆ ಮಾಡಿದೆ. ರಾಜ್ಯ ಸರ್ಕಾರವು ಇದಕ್ಕನುಗುಣವಾಗಿ ರೂ.14,64,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದ್ದರಿಂದ ಈ ಆದೇಶ :

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 5 ಸ್ವಜಯೋ (ಡಿಆರ್‌ಡಿಎ) 2004, ಬೆಂಗಳೂರು, ದಿನಾಂಕ: 22 -01-2005**

ರಾಜ್ಯ ಸರ್ಕಾರವು ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ಆಡಳಿತ ವೆಚ್ಚಕ್ಕಾಗಿ ಎರಡನೇ ಕಂತಿನ ಹಣ ರೂ.14,64,000 ಗಳನ್ನು (ಹದಿನಾಲ್ಕು ಲಕ್ಷದ ಅರವತ್ತಾನ್ಲಲ್ಕು ಸಾವಿರ ಮಾತ್ರ) ಕೆಳಕಂಡ ಜಿಲ್ಲಾಪಂಚಾಯತಿಗಳಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

(ರೂಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿಲ್ಲಾ ಪಂಚಾಯತಿಯ ಕೋಡ್ | ಡಿ.ಡಿ.ಒ ಕೋಡ್ | ಬಿಡುಗಡೆಯಾಗಿರುವ ಕೇಂದ್ರದ ಪಾಲು | ಬಿಡುಗಡೆ ಮಾಡುತ್ತಿರುವ ರಾಜ್ಯದ ಪಾಲಿನ ಹಣ |
|---|---|---|---|---|---|
| 1 | ಬಾಗಲಕೋಟೆ | 461 | 2900ZZ0001 | 22,07,000 | 7,36,000 |
| 2 | ಚಿತ್ರದುರ್ಗ | 403 | 1600ZZ0001 | 11,33,000 | 3,78,000 |
| 3 | ಗುಲ್ಬರ್ಗ | 417 | 3200ZZ0003 | 10,51,000 | 3,50,000 |
| | | | **ಒಟ್ಟು** | **43,91,000** | **14,64,000** |

ಅನ್ವಯವಾಗುವ ಷರತ್ತುಗಳು ಇಂತಿವೆ.

1999ರ ಡಿಆರ್‌ಡಿಎ ಆಡಳಿತ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಜಿಲ್ಲಾ ಪಂಚಾಯತ್‌ಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ಯಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-1-ಜಿಲ್ಲಾ ಪಂಚಾಯತ್‌ಗಳು-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ-201-ಜಿಲ್ಲಾ ಪಂಚಾಯತ್‌ಗಳಿಗೆ ಅನುದಾನ (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು. (2515-00-196-1-06-201).

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

2004-2005 ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಉಪ ಕಾರ್ಯದರ್ಶಿ (ಆಡಳಿತ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆಯಾ ಮಾಹೆಯ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 13 ಪಿಬಿಎಸ್ 05 ದಿನಾಂಕ 17-01-2005 ಹಾಗೂ ಪತ್ರ ಸ್ವೀಕೃತಿ ಮತ್ತು ರವಾನೆ ಶಾಖೆಯ ಯೂನಿಕ್ ನಂ.8/05 ದಿನಾಂಕ 22-01-2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಂ. ಶಿವಪ್ರಕಾಶ್**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## RURAL DEVELOPMENT AND PANCHAYAT RAJ SECRETARIAT

**Sub:** Release of II instalment of State share under DRDA Administration during 2004-2005 to Bagalkot, Chitradurga and Gulbarga Zilla Panchayats- Reg. (25 % of the Allocation).

**Read:**
1. Govt. of India Ltr. No. R-17014/12/2004 - DRDA (Sr.No.20) dated: 28-04-2004.
2. Government Order No. RDP 5 SJY (DRDA) 04, dated: 22-05-2004.
3. GOI Ltr.No. R-17014/12/2004-DRDA (Sr.No.107) dated: 21-12-2004.

**PREAMBLE:**

Government of India and State Government have released Rs. 5,10,68,000 and Rs. 1,70,23,000 respectively to all Zilla Panchayats as first instalment for the year 2004-2005. Now the Central Government have released Rs. 43,91,000 to Bagalkot, Chitradurga and Gulbarga Zilla Panchayats. Accordingly the State Government has to release Rs.14,64,000. Hence this order.

### Government Order No. RDP 5 SJY (DRDA) 2004, Bangalore, Dated : 22nd January, 2005

Sanction of the Government is hereby accorded for release of II instalment of Rs. 14,64,000 (Rupees Fourteen lakh sixty four thousand only) towards Administrative Expenses to following Zilla Panchayats.

(In Rupees)

| Sl. No. | Name of the Zilla Panchayat | Zilla Panchayat Code | D.D.O. Code | Central Share released (II instalment) | State share being released (II instalment) |
|---|---|---|---|---|---|
| 1 | Bagalkot | 461 | 2900ZZ0001 | 22,07,000 | 7,36,000 |
| 2 | Chitradurga | 403 | 1600ZZ0001 | 11,33,000 | 3,78,000 |
| 3 | Gulbarga | 417 | 3200ZZ0003 | 10,51,000 | 3,50,000 |
| | | | **Total** | **43,91,000** | **14,64,000** |

**The conditions are as follows:-**

The amount should be utilised only for the meeting the salary expenditure and contingent expenditure as per the DRDA Administration Guidelines 99. The amount should not be utilised for any other purpose.

The funding pattern under the scheme will be 75: 25 between the Centre and the State.

The expenditure on the scheme shall be debitable to the Head of Account 2515-other Rural Development Programmes-00-196-Assistance to Zilla Panchayats-1-Zilla Panchayats-06-DRDA Administrative Charges-201-Grant-in-Aid for Zilla Panchayats (Plan) (2515-00-196-1-06-201).

The release of funds is subject to audit by Internal Audit of the Department of Rural Development.

The Chief Accounts Officer of concerned Zilla Panchayats are authorised to draw amount as per rules.

The Deputy Secretary (Admn) of the concerned Zilla Panchayats should submit approved annual plan for 2004-2005.

Monthly expenditure statement along with the post wise details of the staff may be sent to the Director (SEP), Rural Development and Panchayat Raj Department by 10th of every succeeding month.

The Chief Accounts Officer of the concerned Zilla Panchayats should send audited statement of accounts and utilisation certificate to the Director (SEP), Rural Development & Panchayat Raj Department.

This order issues with the concurrence of the Internal Financial Advisor's Note No. RDP 13 PBS 05 Dtd: 17-01-2005 & Receipt and Issues section Unique No. 8/05 Dated: 22-01-2005.

By order and in the name of the Governor of Karnataka
**B.M. SHIVAPRAKASH**
Director (SEP), & E/o Joint Secretary to Govt.,
Rural Development & Pan.Raj Department.

PR-168

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ**

**ವಿಷಯ:** ಬೀದರ್ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿನ ಅವ್ಯವಹಾರ - ಶ್ರೀ.ಗುರಣ್ಣ ಕೊಳ್ಳೂರ ಅಂದಿನ ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ), ಮತ್ತು ಶ್ರೀ.ಕಾಶಿನಾಥ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ) ಜಿಪಂಇಂ ಉಪ ವಿಭಾಗ ಬಸವ ಕಲ್ಯಾಣ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ -ದಂಡನೆ ವಿಧಿಸುವ ಬಗ್ಗೆ -ಆದೇಶ.

**ಓದಲಾಗಿದೆ:**

1. ಮುಕಾನಿಅ, ಜಿಪಂ, ಬೀದರ್ ಇವರ ಪತ್ರ ಸಂ. ಜಿಪಬಿ:ಮುಕಾಅ:ಆಶಾ:96-97 ದಿ. 18-12-96.
2. ಕಾರಣ ಕೇಳುವ ನೋಟೀಸ್ ಸಂ. ಗ್ರಾಅಪ 238 ಇಎನ್‌ಕ್ಯೂ 96, ದಿ. 2-4-97.
3. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 238 ಇಎನ್‌ಕ್ಯೂ 96, (ಭಾಗ-1) ದಿ:11-6-97, 11-4-2000, 23-3-01.
4. ವಿಚಾರಣಾಧಿಕಾರಿಗಳ ದಿ. 3-1-2003 ರ ವಿಚಾರಣಾ ವರದಿ.
5. ಶ್ರೀ.ಗುರಣ್ಣ ಕೊಳ್ಳೂರ ಅಂದಿನ ಕಾರ್ಯಪಾಲಕ ಇಂಜಿನಿಯರ್,(ನಿವೃತ್ತ), ಮತ್ತು ಶ್ರೀ.ಕಾಶಿನಾಥ, ಸಹಾಯಕ ಕಾರ್ಯಪಾಲಕ ಇಂಜಿನಿಯರ್,(ನಿವೃತ್ತ) ಜಿಪಂಇಂ ಉಪ ವಿಭಾಗ, ಬಸವ ಕಲ್ಯಾಣ ಇವರಿಗೆ ಜಾರಿ ಮಾಡಿದ್ದ ಎರಡನೇ ಕಾರಣ ಕೇಳುವ ನೋಟೀಸ್ ಸಂ. ಗ್ರಾಅಪ 238 ಇಎನ್‌ಕ್ಯೂ 96 ದಿ. 21-7-03.
6. ಶ್ರೀ.ಗುರಣ್ಣ ಕೊಳ್ಳೂರ ಅಂದಿನ ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ), ಮತ್ತು ಶ್ರೀ.ಕಾಶಿನಾಥ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ) ಜಿಪಂಇಂ ಉಪ ವಿಭಾಗ ಬಸವ ಕಲ್ಯಾಣ ಇವರ ದಿ. 29-9-03 ರ ಲಿಖಿತ ಹೇಳಿಕೆಗಳು.
7. ಕಾರ್ಯದರ್ಶಿಯವರು, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು, ಇವರ ಪತ್ರದ ಸಂಖ್ಯೆ:ಪಿಎಸ್‌ಸಿ 14 ಸಿಎನ್‌ಎಸ್ 2004,ದಿ:21-8-04.

**ಪ್ರಸ್ತಾವನೆ:**

ಬೀದರ್ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ ನಡೆದಿದೆ ಎನ್ನಲಾದ ಸಾಮಗ್ರಿ ಖರೀದಿ ಮತ್ತು ನಿರ್ವಹಣೆಯಲ್ಲಿನ ಅವ್ಯವಹಾರದ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ. (1) ರ ದಿ.18-12-96 ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ , ಬೀದರ್ ಇವರು ಶ್ರೀ.ಗುರಣ್ಣ ಕೊಳ್ಳೂರ ಅಂದಿನ ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ), ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಬೀದರ್ ಮತ್ತು ಶ್ರೀ.ಕಾಶಿನಾಥ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ), ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ ಬಸವಕಲ್ಯಾಣ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಕೋರಿದ್ದರು. ಸರ್ಕಾರವು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ವರದಿಯನ್ನು ಪರಿಶೀಲಿಸಿ ಇವರುಗಳ ಮೇಲೆ ಕೆ.ಸಿ.ಎಸ್.ಆರ್.ನ ನಿಯಮ 214 ರಡಿ ಇಲಾಖಾ ವಿಚಾರಣೆ ಹೂಡಲು ನಿರ್ಧರಿಸಿ ಮೇಲೆ ಓದಲಾದ ಕ್ರಮ ಸಂ. (2)ರ ದಿ. 2-4-97 ರ ಕಾರಣ ಕೇಳುವ ನೋಟಿಸ್‌ನೊಂದಿಗೆ ಆರೋಪ ಪಟ್ಟಿ ಜಾರಿ ಮಾಡಿತ್ತು. ಆಪಾದಿತ ನಿವೃತ್ತ ಅಧಿಕಾರಿಗಳು ನಿಗದಿತ ಅವಧಿಯಲ್ಲಿ ತಮ್ಮ

ಲಿಖಿತ ಹೇಳಿಕೆ ಸಲ್ಲಿಸಲಿಲ್ಲವಾದ್ದರಿಂದ ಪ್ರಕರಣದ ಸತ್ಯಾಸತ್ಯತೆಯನ್ನರಿಯಲು ವಿವರವಾದ ವಿಚಾರಣೆ ನಡೆಸಲು ನಿರ್ಧರಿಸಿ ಮೇಲೆ ಓದಲಾದ ಕ್ರಮ ಸಂ. (3)ರ ದಿ11-6-97 ರ ಆದೇಶದಲ್ಲಿ ಗುಲ್ಬರ್ಗಾ ವಿಭಾಗಾಧಿಕಾರಿಗಳನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿತ್ತು. ವಿಚಾರಣಾಧಿಕಾರಿಗಳು ತಮಗೆ ಕೆಲಸದ ಒತ್ತಡವಿರುವುದರಿಂದ ಈ ವಿಚಾರಣೆ ನಡೆಸಲು ತಮಗೆ ಸಾಧ್ಯವಿಲ್ಲವೆಂದು ತಿಳಿಸಿದ್ದರಿಂದ ಪ್ರಕರಣವನ್ನು ಅವರಿಂದ ಹಿಂಪಡೆದು ಮೇಲೆ ಓದಲಾದ ಕ್ರಮ ಸಂ.(3)ರ ದಿ.11-4-2000 ದ ಆದೇಶದಲ್ಲಿ ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ.ಆರ್.ಎಲ್. ಅಗ್ನಿಹೋತ್ರಿ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು. ಶ್ರೀ.ಆರ್.ಎಲ್.ಅಗ್ನಿಹೋತ್ರಿ ಇವರು ತಮ್ಮ ಕೆಲಸದ ಒತ್ತಡದಿಂದಾಗಿ ವಿಚಾರಣೆಯನ್ನು ಬೇರೊಬ್ಬರಿಗೆ ವಹಿಸುವಂತೆ ಕೋರಿದ್ದರಿಂದ ಪ್ರಕರಣವನ್ನು ಅವರಿಂದ ಹಿಂಪಡೆದು ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ.ಎಸ್.ಎಸ್.ಸಂಗೊಳ್ಳಿ ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ:(3)ರ ದಿ. 23-3-2001 ರ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಅದರಂತೆ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳು ವಿವರವಾದ ವಿಚಾರಣೆ ನಡೆಸಿ, ಸರ್ಕಾರಕ್ಕೆ ವರದಿಯನ್ನು ಸಲ್ಲಿಸುತ್ತಾ ಆಪಾದಿತರ ಮೇಲಿನ ಕೆಲವು ಆರೋಪಗಳು ಸಾಬೀತಾಗಿವೆ ಎಂದು ಇನ್ನುಳಿದ ಕೆಲವು ಆರೋಪಗಳು ಸಾಬೀತಾಗಿರುವುದಿಲ್ಲವೆಂದು ತಿಳಿಸಿದ್ದರು. ಸರ್ಕಾರವು ವಿಚಾರಣಾ ವರದಿಯನ್ನು ಪರಿಶೀಲಿಸಿ ಸಾಬೀತಾಗಿಲ್ಲವೆಂಬ ಆಪಾದನೆಗಳ ಬಗ್ಗೆ ಸಿಸಿಎ ನಿಯಮಗಳ ನಿಯಮ-11 ಎ ರಂತೆ ತನ್ನದೇ ಆದ ನಿರ್ಣಯಗಳನ್ನು ದಾಖಲಿಸಿತ್ತು. ಆಪಾದಿತರ ಮೇಲಿನ ಆಪಾದನೆ ಹಾಗೂ ಆ ಬಗ್ಗೆ ವಿಚಾರಣಾಧಿಕಾರಿಗಳ ವರದಿ ಹಾಗೂ ನಿಯಮ-11 ಎ ರಂತೆ ಶಿಸ್ತು ಪ್ರಾಧಿಕಾರದ ನಿರ್ಣಯಗಳು ಈ ಕೆಳಕಂಡಂತಿದೆ.

**ಶ್ರೀ ಗುರಣ್ಣ ಕೊಳ್ಳೂರ, ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ) ಜಿಪಂಇಂ ವಿಭಾಗ, ಬೀದರ್.**

**ಆಪಾದನೆ-1:**

ರಾಯಲ್ ಅಸೋಸಿಯೇಟ್ಸ್, ಬೀದರ್ ಇವರಿಗೆ ದಿ. 31-8-94 ರಂದು ಒಂದೇ ದಿನದಲ್ಲಿ 49,650-00 ರೂ.ಗಳ ಖರೀದಿ ಆದೇಶ ನೀಡಿ ಅದೇ ದಿನ ಬಿಲ್ಲುಗಳನ್ನು ಪಾವತಿಸಿ ಖರೀದಿ ನಿಯಮಗಳನ್ನು ಉಲ್ಲಂಘಿಸಿ ಸರ್ಕಾರದ ಹಣವನ್ನು ದುರುಪ ಯೋಗಪಡಿಸಿದ್ದರೆಂಬ ಆರೋಪ.

**ವಿಚಾರಣಾಧಿಕಾರಿಗಳ ವರದಿ:**

ವಿಚಾರಣಾಧಿಕಾರಿಗಳು ಈ ಬಗ್ಗೆ ವಿಚಾರಣೆ ಸಮಯದಲ್ಲಿ ಒದಗಿಬಂದ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿ, ಸಂಬಂಧಪಟ್ಟ ಉಪ ವಿಭಾಗದಿಂದ ದಿ. 28-8-1994 ರಂದು ಬೇಡಿಕೆ ಬಂದಿದ್ದು ದಿ. 30-8-1994 ರಂದು ಖರೀದಿ ಆದೇಶ ನೀಡಲಾಗಿದ್ದು, ಈ ನಡುವೆ ನೋಂದಾಯಿತ ಫರ್ಮಗಳು ಕಡಿಮೆ ಪ್ರಮಾಣದ ಬೇಡಿಕೆ ಪೂರೈಸಲು ಒಪ್ಪಲಿಲ್ಲವೆಂದೂ ಆಪಾದಿತರು ತಿಳಿಸಿದ್ದು, ಅದನ್ನು ಹಗುರವಾಗಿ ತಳ್ಳಿ ಹಾಕಲು ಬರುವುದಿಲ್ಲವೆಂದೂ ಹಾಗೇ ಸ್ವಲಾಭಕ್ಕಾಗಿ ಆ ಸಾಮಗ್ರಿಗಳನ್ನು ಖರೀದಿಸಲು ಇಚ್ಚಿಸಿದ್ದರೆ ಅವರು ದಿ. 20-8-1994 ರಂದೇ ಖರೀದಿ ಆದೇಶ ಮಾಡಬೇಕಾಗಿತ್ತೆಂದೂ ಈ ಕಾರಣದಿಂದ ಸಾಮಗ್ರಿಗಳನ್ನು ಒಂದೇ ದಿವಸ ಖರೀದಿ ಮಾಡಿದ್ದಾಗ್ಯೂ ಅಲ್ಲಿ ದುರುದ್ದೇಶಗಳು ಇಲ್ಲದ್ದರಿಂದ ಮತ್ತು ಸರ್ಕಾರಕ್ಕೆ ಯಾವ ಹಣಕಾಸಿನ ನಷ್ಟ ಉಂಟಾಗಿಲ್ಲದ ಕಾರಣ ಈ ಆಪಾದನೆ ಸಾಬೀತಾಗಿಲ್ಲವೆಂದು ವರದಿ ಮಾಡಿದ್ದಾರೆ.

49,560-00 ರೂ.ಗಳ ಸಾಮಗ್ರಿಗಳನ್ನು ಖರೀದಿಸುವಾಗ ಇಲಾಖೆಯ ಖರೀದಿ ನಿಯಮಗಳನ್ನು ಅನುಸರಿಸಬೇಕಾಗಿದ್ದುದು ಇಲಾಖೆಯ ಪ್ರಮುಖ ಹುದ್ದೆಯನ್ನು ಹೊಂದಿದ್ದ ಆಪಾದಿತ ಅಧಿಕಾರಿಯ ಕರ್ತವ್ಯವಾಗಿತ್ತು. ಹಾಗೇ ನಿಯಮಗಳನ್ನು ಪಾಲಿಸದೇ ಆಪಾದಿತ ಅಧಿಕಾರಿಯು ಮಾಡಿರುವ ಖರೀದಿಯು ನಿಯಮಗಳಿಗೆ ವಿರುದ್ಧವಾಗಿರುವುದರಿಂದ ಅದು ಅವರ ಕರ್ತವ್ಯಲೋಪವಾಗುತ್ತದೆಯಲ್ಲದೆ ಇಡೀ ವ್ಯವಹರಣೆ ಕೇವಲ ಒಂದೇ ದಿನ ಅಂದರೆ ದಿ. 31-8-94 ರಂದೇ ಖರೀದಿಗೆ ಅನುಮೋದನೆ ನೀಡುವುದು ಅಂದೇ ಸಾಮಗ್ರಿಗಳು ಸರಬರಾಜು ಆಗುವ, ಅಂದೇ ಹಣ ಪಾವತಿ ಮಾಡುವುದು ಈ ರೀತಿ ಎಲ್ಲಾ ಕೆಲಸ ನಡೆದಿರುವುದನ್ನು ಅವಗಾಹಿಸಿದಲ್ಲಿ ಇದೊಂದು ಸಂಶಯಾಸ್ಪದ ಖರೀದಿ ಪ್ರಕರಣವೆಂದು ಭಾವಿಸಬೇಕಾಗುತ್ತದೆ. ಈ ಸಂಶಯವನ್ನು ಮಾಡದಿರಲು ಆಪಾದಿತರ ಅಧಿಕಾರಿಯ ವಿವರವಾದ ವಿಚಾರಣೆಯ ಸಮಯದಲ್ಲಿ ಯಾವುದೇ ದಾಖಲಾತಿಗಳನ್ನು ಒದಗಿಸಿಲ್ಲದಿರುವುದರಿಂದ ಆಪಾದಿಸಿದಂತೆ ಆಪಾದಿತ ಅಧಿಕಾರಿಯ ಮೇಲೆ ಈ ಆರೋಪ ಸಾಬೀತಾಗುತ್ತದೆ ಎಂದು ಶಿಸ್ತು ಪ್ರಾಧಿಕಾರವಾದ ಸರ್ಕಾರವು ನಿಯಮ-11-ಎ ರಂತೆ ನಿರ್ಣಯ ಕೈಗೊಂಡಿತ್ತು.

**ಆಪಾದನೆ-2:**

ವಿಭಾಗಕ್ಕೆ ಬಿಡುಗಡೆಯಾದ452.043 ಲಕ್ಷಗಳ ಪೈಕಿ ನಿಯಮಾನುಸಾರ ಶೇಕಡ 80 ರಷ್ಟು ಮೊತ್ತಕ್ಕೆ ಸಾಮಗ್ರಿಗಳನ್ನು ಖರೀದಿಸಬಹುದಾಗಿದ್ದರೂ ಆಪಾದಿತ ಅಧಿಕಾರಿ 384.00 ಲಕ್ಷ ರೂ.ಗಳು ಅನಾವಶ್ಯಕ ಹಾಗೂ ಕಳಪೆ ಸಾಮಗ್ರಿಗಳನ್ನು ಖರೀದಿಸಿ ನಿಗದಿತ ಮೊತ್ತಕ್ಕಿಂತ 22.04 ಲಕ್ಷ ರೂ.ಗಳ ಸಾಮಗ್ರಿಗಳನ್ನು ಹೆಚ್ಚುವರಿಯಾಗಿ ಖರೀದಿಸಿರುವ ಮತ್ತು ತಾವು ನಿವೃತ್ತಿ ಆಗುವ ದಿನಾಂಕದಂದು 72.00 ಲಕ್ಷ ರೂ.ಗಳ ಸಾಮಗ್ರಿಗಳ ಸರಬರಾಜಿಗೆ ವಿವಿಧ ಫರ್ಮಗಳಿಗೆ ಆದೇಶ ನೀಡಿದ್ದಾರೆ. ಆ ಹೆಚ್ಚುವರಿ ಖರೀದಿಗಳ ಪೂರ್ಣ ಬಿಲ್ಲನ್ನು ಸಂಬಂಧಪಟ್ಟ ಸಾಲಿನಲ್ಲಿ ಪಾವತಿಸಲಾಗದೆ 95-96ನೇ ಸಾಲಿನ ಖರೀದಿಯ ಮೇಲೆ ಪರಿಣಾಮ ಉಂಟಾಗಿ 36.475 ಲಕ್ಷ ರೂ.ಗಳ ಬಿಲ್ಲುಗಳ ಪಾವತಿ ಆಗದೇ ಬಾಕಿ ಉಳಿಯಲು ಕಾರಣರಾಗಿರುತ್ತೀರೆಂಬ ಆಪಾದನೆ.

**ವಿಚಾರಣಾಧಿಕಾರಿಗಳ ವರದಿ:**

ವಿಚಾರಣಾಧಿಕಾರಿಗಳು ಈ ಬಗ್ಗೆ ಆ ಸಾಲಿನಲ್ಲಿ ಒಟ್ಟು 688.21 ಲಕ್ಷ ರೂ.ಗಳ ಅನುದಾನ ಇದ್ದು ಶೇಕಡ 80 ರಷ್ಟು ಅಂದರೆ 526.86 ಲಕ್ಷ ರೂ.ಗಳು ಮಾತ್ರವೆಂದು 22.40 ಲಕ್ಷ ರೂ.ಗಳ ಹೆಚ್ಚು ಖರ್ಚು ಮಾಡಿಲ್ಲ ಎನ್ನುವುದು ಅಂಕಿಅಂಶಗಳ ಮೇಲಿಂದ ಸರಿಯಿದೆ ಎಂದು ವಿಚಾರಣೆಯ ಸಮಯದಲ್ಲಿ ಒದಗಿ ಬಂದ ಸಾಕ್ಷ್ಯಾಧಾರಗಳ ಹಿನ್ನೆಲೆಯಲ್ಲಿ ಆಪಾದನೆಯಲ್ಲಿ ಹೇಳಿದಂತೆ ಆಪಾದಿತರು ನಿಯಮ ಮೀರಿ ಹೆಚ್ಚಾಗಿ ಖರ್ಚು ಮಾಡಿಲ್ಲ ಎಂಬುದು ಸಾಬೀತಾಗುತ್ತದೆ. ಆದ್ದರಿಂದ ಈ ಆರೋಪ ಸಾಬೀತಾಗುವುದಿಲ್ಲವೆಂದು ಮತ್ತು 36.475 ಲಕ್ಷ ರೂ.ಗಳ ಬಿಲ್ಲುಗಳು ಪಾವತಿಯಾಗದೇ ಉಳಿದಿದ್ದು ಮತ್ತು ಅನಾವಶ್ಯಕವಾಗಿ ಸಾಮಗ್ರಿಗಳನ್ನು ಖರೀದಿಸಿರುವ ಬಗ್ಗೆ ಆಪಾದಿತ ಅಧಿಕಾರಿ ಅವಶ್ಯಕವಾದ ಸಾಮಗ್ರಿಗಳನ್ನು ಮಾತ್ರ ಖರೀದಿಸಬೇಕಾಗಿತ್ತೆಂದೂ, ತಾವು ನಿವೃತ್ತ ದಿನಾಂಕದಂದು ಇಷ್ಟು ಮೊತ್ತದ ಅನಾವಶ್ಯಕ ಸಾಮಗ್ರಿಗಳ ಖರೀದಿ ಪ್ರಾಮಾಣಿಕವಾದುದೆಂದು ಅಥವಾ ಇಲಾಖೆಯ ಒಳಿತಿಗಾಗಿ ಅನ್ನಲು ಅವಕಾಶವಿಲ್ಲ. ತಾನು ನಿವೃತ್ತಿಯಾಗುತ್ತೇನೆಂದು ತಿಳಿದೂ ತಿಳಿದೂ ಖರೀದಿ ಆದೇಶ ಮಾಡಿದ್ದು ಆಪಾದಿತರ ಮನೋಭಾವನೆಯನ್ನು

ರುಜುವಾತುಪಡಿಸುತ್ತದೆ. ಆದ್ದರಿಂದ ಆಪಾದಿತರು ತಮ್ಮ ಅಧಿಕಾರ ವ್ಯಾಪ್ತಿ ಮೀರಿ ಅನಾವಶ್ಯಕ ಸಾಮಗ್ರಿಗಳನ್ನು ಖರೀದಿಸಿ ಕರ್ತವ್ಯಚ್ಯುತಿ ಎಸಗಿರುತ್ತಾರೆಂದು ನಿರ್ಣಯಿಸಬಹುದೆಂದೂ ಮತ್ತು ನಿವೃತ್ತರಾಗುವ ಗಡಿಬಿಡಿಯಲ್ಲಿ ಲಕ್ಷಗಟ್ಟಲೆ ಬೆಲೆಯ ಸಾಮಗ್ರಿ ಖರೀದಿ ಆದೇಶಕ್ಕೆ ಸಂಬಂಧಪಟ್ಟ ಇತರ ದಾಖಲೆಗಳ ಪರಿಶೀಲನೆಗೆ ಅವಕಾಶ ಇರದು, ಫರ್ಮಗಳು ನೋಂದಣಿಯಾಗಿದೆಯೋ ಇಲ್ಲವೋ ಎಂಬುದನ್ನು ಪರಿಶೀಲಿಸುವುದು ಅಸಾಧ್ಯ ಎನ್ನುವ ಧೋರಣೆ ಕಂಡುಬರುತ್ತದೆ. ಇದು ಅವರ ಕರ್ತವ್ಯ ನಿರ್ವಹಣೆಯ ಅಸಮರ್ಥತೆಯನ್ನು ಅಥವಾ ಉದ್ದೇಶಪೂರ್ವಕ ಉದಾಸೀನತೆಯನ್ನು ತೋರಿಸುತ್ತದೆ ಎಂದರೆ ತಪ್ಪಲ್ಲವೆಂದೂ ನೋಂದಣಿಯಾಗದ ಫರ್ಮಗಳಿಂದ ಸಾಮಗ್ರಿಗಳನ್ನು ಖರೀದಿಸಿದ್ದು ಇದರಿಂದಾಗಿ ಸರ್ಕಾರಕ್ಕೆ ಬರಬೇಕಾದ ಕರಗಳು ವಸೂಲಾಗದೇ ಹೋಗಿರುವುದು ಸ್ಪಷ್ಟವಾಗಿದೆ. ಆದ್ದರಿಂದ ಆ ಬಗ್ಗೆಯೂ ಸಹ ಆಪಾದನೆ ರುಜುವಾತಾಗುತ್ತದೆಂದು ವಿಚಾರಣಾಧಿಕಾರಿಗಳು ವರದಿ ಮಾಡಿದ್ದಾರೆ.

**ಆಪಾದನೆ-3:**

ನೋಂದಾಯಿತವಲ್ಲದ ಫರ್ಮಗಳಿಂದ ಖರೀದಿ ಮಾಡಿ ಸರ್ಕಾರಕ್ಕೆ ಬರಬೇಕಾದ ತೆರಿಗೆ ಆದಾಯದ ಹಣ ದುರುಪಯೋಗ ಮಾಡಿದ್ದರೆಂಬ ಬಗ್ಗೆ ಆಪಾದನೆ:

ಮೇಲೆ ಎರಡನೇ ಆರೋಪದಲ್ಲಿ ಹೇಳಿದಂತೆ ವಿಚಾರಣಾಧಿಕಾರಿಗಳು ವಿವರವಾದ ವಿಚಾರಣೆಯ ನಂತರ ಫರ್ಮ ನೋಂದಾವಣಿ ಆಗಿದೆಯೋ, ಇಲ್ಲವೋ ಎಂಬುದನ್ನು ಪರಿಶೀಲಿಸದೇ ಅಸಡ್ಡೆ ಧೋರಣೆ ತಳೆದಿದ್ದು ಕಂಡುಬರುತ್ತದೆ ಎಂದು ಇದು ಅವರ ಕರ್ತವ್ಯ ನಿರ್ವಹಣೆಯ ಅಸಮರ್ಥತೆ ಹಾಗೂ ಉದ್ದೇಶಪೂರ್ವಕ ಉದಾಸೀನತೆಯನ್ನು ತೋರಿಸುತ್ತದೆ ಎಂದರೆ ತಪ್ಪಲ್ಲವೆಂದು ನಿರ್ಣಯಕ್ಕೆ ಬಂದು, ಆಪಾದಿತರು ನೋಂದಾವಣೆಯಾಗದೆ ಫರ್ಮಗಳಿಂದ ಸರಕು ಖರೀದಿಸಿದ್ದು , ಕರಗಳು ವಸೂಲಾಗದೇ ಹೋಗುವುದು ಸ್ಪಷ್ಟವೆಂದು ಕಾರಣ ಈ ಆಪಾದನೆ ರುಜುವಾತಾಗುತ್ತದೆ ಎಂದು ನಿರ್ಣಯಿಸಿರುತ್ತಾರೆ.

**II. ಕಾಶೀನಾಥ್ ಸಕಾಇಂ (ಪ್ರಭಾರ) ಇವರ ಮೇಲಿನ ಆಪಾದನೆಗಳು ಹಾಗೂ ಆ ಬಗ್ಗೆ ವಿಚಾರಣಾಧಿಕಾರಿಗಳ ವರದಿ:**

**ಆಪಾದನೆ-1:**

ರಾಯಲ್ ಅಸೋಸಿಯೇಟ್ಸ್, ಬೀದರ್ ಇವರಿಂದ ಅನಾವಶ್ಯಕವಾಗಿ ಹಾಗೂ ಕಳಪೆ ಮಟ್ಟದ ಸಾಮಗ್ರಿಗಳನ್ನು ನಿಯಮಗಳನ್ನು ಉಲ್ಲಂಘಿಸಿ ಖರೀದಿಸಿ ಸರ್ಕಾರಿ ಹಣ ದುರುಪಯೋಗವಾಗಿರುವುದಕ್ಕೆ ಕಾರಣರಾಗಿರುವರೆಂಬ ಬಗ್ಗೆ:

**ವಿಚಾರಣಾಧಿಕಾರಿಗಳ ವರದಿ:**

ವಿಚಾರಣೆಯ ಸಮಯದಲ್ಲಿ ಶ್ರೀ ಕಾಶೀನಾಥ್ ಇವರ ಮೇಲೆ ಸಾಕ್ಷಿಗಳು ಒದಗಿ ಬಂದಂತೆ ಶ್ರೀ ಕಾಶೀನಾಥ್ ಇವರಿಗೆ ಸಂಬಂಧಿಸಿದಂತೆ, ಇವರು ಕೇವಲ ಬೇಡಿಕೆ ಪತ್ರ ಮಾತ್ರ ಸಲ್ಲಿಸಿರುತ್ತಾರೆ. ಅದರ ಮೇಲೆ ಪರಿಶೀಲನೆ ಮಾಡುವ ಅಧಿಕಾರ ಅವರ ಮೇಲಿನ ಅಧಿಕಾರಿಗೆ ಇರುತ್ತದೆ. ಆ ಅಧಿಕಾರಿ ಅದನ್ನು ಪರಿಶೀಲಿಸಬೇಕಾಗಿತ್ತು. ಆಪಾದಿತ ಅಧಿಕಾರಿ ಬೇಡಿಕೆ ಪತ್ರ ಸಲ್ಲಿಸಿದ ಮೇಲೆ ಉಳಿದ ಆಪಾದನೆ ಅವರಿಗೆ ಸಂಬಂಧವಿಲ್ಲವೆಂದೂ ಅವರನ್ನು ದೋಷಿ ಎನ್ನಬಾರದೆಂದು ವಿಚಾರಣಾಧಿಕಾರಿಗಳು ವರದಿ ಮಾಡಿದ್ದಾರೆ.

ಉಪ ವಿಭಾಗದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರಾದ ಆಪಾದಿತ ಅಧಿಕಾರಿ ಬೇಡಿಕೆ ಪತ್ರವನ್ನು ಸಲ್ಲಿಸಿದ್ದು , ಅದನ್ನು ನಿಗದಿತ ನಮೂನೆಯಲ್ಲಿ ಸಲ್ಲಿಸಬೇಕಾಗಿತ್ತೆಂದು ತಿಳಿದಿರಲಾರದೆಂದು ಭಾವಿಸುವುದು ಕಷ್ಟ. ಹಾಗೊಮ್ಮೆ ಅವರಿಗೆ ತಿಳಿದಿದ್ದರೂ ಸಹ ಅದು ಅವರ ಕರ್ತವ್ಯ ಲೋಪವೆಂದು ಭಾವಿಸಬೇಕಾಗುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ ಶ್ರೀ.ಗುರಣ್ಣ ಕೊಳ್ಳೂರ ಅವರೊಂದಿಗೆ ಶ್ರೀ ಕಾಶೀನಾಥ್ ಇವರು ಸಹ ಶಾಮೀಲಾಗಿ ಮೆ. ರಾಯಲ್ ಅಸೋಸಿಯೇಟ್ಸ್ ಇವರಿಂದ ನಿಯಮ ಬಾಹಿರ ಖರೀದಿಯಲ್ಲಿ ತೊಡಗಿ ಹಣ ಪಾವತಿಸಲು ಕಾರಣರಾಗಿದ್ದಾರೆಂಬ ಆಪಾದನೆ ಸಾಬೀತಾಗುತ್ತದೆ ಎಂದು ನಿರ್ಣಯಿಸಿದೆ.

**ಆಪಾದನೆ-2:**

ಅನಾವಶ್ಯಕ ಹಾಗೂ ಕಳಪೆ ದರ್ಜೆಯ ಸಾಮಗ್ರಿಗಳ ಖರೀದಿ, 94-95ನೇ ಸಾಲಿನಲ್ಲಿ ನಿಗಧಿಯಾದ ಮೊತ್ತಕ್ಕಿಂತ 22.40 ಲಕ್ಷ ರೂ.ಗಳ ಹೆಚ್ಚುವರಿ ವೆಚ್ಚ ಉಂಟಾಗಲು ಕಾರಣರೆಂಬ ಆಪಾದನೆ ಬಗ್ಗೆ.

**ವಿಚಾರಣಾಧಿಕಾರಿಗಳ ವರದಿ:**

ವಿಚಾರಣೆಯ ಸಮಯದಲ್ಲಿ ಮೇಲಿನ 1ನೆಯ ಆಪಾದನೆಯ ಬಗ್ಗೆ ನಿರ್ಣಯಿಸಿದಂತೆ ವಿಚಾರಣಾಧಿಕಾರಿಗಳು ವಿಚಾರಣೆಯ ಸಮಯದಲ್ಲಿ ಒದಗಿ ಬಂದ ಸಾಕ್ಷಿಗಳ ಹೇಳಿಕೆಗಳಂತೆ ಬೇಡಿಕೆ ಪತ್ರ ಸಲ್ಲಿಸಬೇಕಾಗಿದ್ದು, ಈ ಆಪಾದಿತ ಅಧಿಕಾರಿಯ ಕರ್ತವ್ಯ ಅವುಗಳನ್ನು ಪರಿಶೀಲನೆ ಮಾಡಿ ಖರೀದಿ ಕ್ರಮ ಕೈಗೊಳ್ಳಬೇಕಾದುದು ಮೊದಲನೇ ಆಪಾದಿತ ಅಧಿಕಾರಿಯ ಕರ್ತವ್ಯವೆಂದೂ ಸಾಕ್ಷಿಗಳು ತಿಳಿಸಿರುತ್ತಾರೆ. ಮತ್ತು ಈ ಆಪಾದನೆ ಶ್ರೀ ಕಾಶೀನಾಥ್‌ಗೆ ಸಂಬಂಧಿಸಿಲ್ಲವೆಂದೂ ಹೇಳಿರುವುದರಿಂದ ಈ ಆಪಾದನೆ ಅವರ ಮೇಲೆ ರುಜುವಾತಾಗುವುದಿಲ್ಲವೆಂಬ ನಿರ್ಣಯಕ್ಕೆ ಬಂದಿರುತ್ತಾರೆ.

ಪೂರ್ಣ ಪ್ರಮಾಣದ ಹೆಚ್ಚುವರಿ ಖರೀದಿಗೆ ಆಪಾದಿತ ಅಧಿಕಾರಿ ಶ್ರೀ ಕಾಶೀನಾಥ್ ಇವರು ಜವಾಬ್ದಾರರಲ್ಲ. ಇವರು ಕೆಲಸ ನಿರ್ವಹಿಸುತ್ತಿರುವ ಉಪ ವಿಭಾಗದ ಸಾಮಗ್ರಿಗಳ ಖರೀದಿಗೆ ಸಂಬಂಧಿಸಿದಂತೆ ಮಾಡಲಾಗಿರುವ ಹೆಚ್ಚುವರಿ ಖರೀದಿಯಲ್ಲಿ ಇವರು ಭಾಗಿಯಲ್ಲವೆಂದು ನಿರ್ಣಯಕ್ಕೆ ಬರುವುದು ಸಮಂಜಸವಲ್ಲ. ಬಿಡುಗಡೆಯಾದ ಅನುದಾನ ಅದರಲ್ಲಿ ಮಾಡಲಾಗಿರುವ ಖರೀದಿ ಹಾಗೂ ಉಳಿದಿರುವ ಅನುದಾನ ಮತ್ತು ಅಷ್ಟರೊಳಗೆ ಆಯಾ ಸಾಲಿನಲ್ಲಿ ಒದಗಿಬಂದ ಅನುದಾನ ಹಾಗೂ ಅದಕ್ಕೆ ಸೀಮಿತಗೊಂಡ ವೆಚ್ಚವನ್ನು ಭರಿಸಬೇಕೆಂಬ ವಿಷಯ ಉಪ ವಿಭಾಗದ ಅಧಿಕಾರಿಗೆ ತಿಳಿದಿರುವುದಿಲ್ಲವೆಂಬ ನಿರ್ಣಯಕ್ಕೆ ಬರುವುದು ಸಾಧ್ಯವಿಲ್ಲದಿರುವುದರಿಂದ ಈ ಆಪಾದನೆಯೂ ಸಹ ಆಪಾದಿತ ಅಧಿಕಾರಿಯ ಮೇಲೆ ರುಜುವಾತಾಗುತ್ತದೆಯೆಂದು ಸಕ್ಷಮ ಪ್ರಾಧಿಕಾರವಾದ ಸರ್ಕಾರ ನಿರ್ಣಯಿಸುತ್ತದೆ.

**ಆಪಾದನೆ-3:**

ಖರೀದಿ ಸಮಯದಲ್ಲಿ ದಾಸ್ತಾನು ರಿಜಿಸ್ಟರ್‌ಗಳು, ಎಂಎಎಸ್ ಲೆಕ್ಕಪತ್ರಗಳು, ಎಂಪಿಎಸ್ ರಿಜಿಸ್ಟರ್‌ಗಳು ಇತ್ಯಾದಿಗಳನ್ನು ನಿಯಮಾನುಸಾರ ನಿರ್ವಹಿಸದೇ ನಿಯಮಬಾಹಿರ ಖರೀದಿ ಮಾಡಿ ಸ್ವಂತ ಲಾಭಕ್ಕಾಗಿ 49,650-00 ಸರ್ಕಾರಿ ಹಣ ದುರುಪಯೋಗ ಮಾಡಿಕೊಂಡಿರುವರೆಂಬ ಬಗ್ಗೆ:

**ವಿಚಾರಣಾಧಿಕಾರಿಗಳ ವರದಿ:**

ವಿಚಾರಣೆಯ ಸಮಯದಲ್ಲಿ ಆಪಾದಿತರು ಕೇವಲ 2 ತಿಂಗಳು ಮಾತ್ರ ಕೆಲಸ ಮಾಡಿರುವುದನ್ನು ಒಪ್ಪಿ ಹಾಗೂ 2 ತಿಂಗಳಲ್ಲಿಯೂ ಸಹ ಹಿಂದಿನ ಲೆಕ್ಕಪತ್ರಗಳನ್ನು Up date ಮಾಡಿ ಸಲ್ಲಿಸಬೇಕಾಗಿತ್ತು. ಹಾಗೇ ಮಾಡದಿದ್ದರೆ ಹಾಗೂ 2 ತಿಂಗಳಿನಲ್ಲಿ ಒಂದು ವೇಳೆ ಅವರು ಸಂಬಂಧಿಸಿದ ದಾಖಲೆಗಳನ್ನು ಖರೀದಿ ಅಧಿಕಾರಿಗೆ ತೋರಿಸದಿದ್ದರೆ ಅವುಗಳನ್ನು ತರಿಸಿಕೊಂಡು ಪರಿಶೀಲಿಸಿ, ಅವುಗಳನ್ನು ಹಾಜರುಪಡಿಸದೇ ಇದ್ದರೆ ಅವರ ವಿರುದ್ಧ ಕ್ರಮ ಕೈಗೊಳ್ಳುವುದು ಹಿರಿಯ ಅಧಿಕಾರಿಯಾದ ಶ್ರೀ. ಗುರಣ್ಣ ಕೊಳ್ಳೂರ್ ಇವರ ಕರ್ತವ್ಯವಾಗಿತ್ತು. ಹೀಗೆ ಯಾವುದೇ ರೀತಿಯಿಂದ ಪರಿಶೀಲಿಸಿದರೂ ಶ್ರೀ.ಕಾಶಿನಾಥ್ ಇವರ ಮೇಲಿನ ಆಪಾದನೆ, ರುಜುವಾತಾಗುವುದಿಲ್ಲವೆಂದು ವಿಚಾರಣಾಧಿಕಾರಿಗಳು ನಿರ್ಣಯಕ್ಕೆ ಬಂದಿರುತ್ತಾರೆ.

ಆಪಾದಿಸಿದಂತೆ ಆಪಾದಿತ ಅಧಿಕಾರಿ ಉಪ ವಿಭಾಗದ ಮುಖ್ಯಸ್ಥರಾಗಿ ಕೆಲಸ ನಿರ್ವಹಿಸುವಲ್ಲಿ ಲೋಪವೆಸಗಿರುವುದು ಕಂಡು ಬರುತ್ತದೆ. ಹಾಗಾಗಿ ಅವರ ಮೇಲಿನ ಈ ಆಪಾದನೆ ರುಜುವಾತಾಗುತ್ತದೆ ಎಂದು ನಿಯಮ-11 ಎ ರಂತೆ ಸರ್ಕಾರವು ನಿರ್ಣಯಿಸಿದೆ.

ಈ ಪ್ರಕರಣದಲ್ಲಿ ಸಿಒಡಿ ವಿಚಾರಣೆ ನಡೆಸಿದ್ದು ಸಿಒಡಿ ವರದಿಯಲ್ಲಿ ಸಾಮಗ್ರಿಗಳನ್ನು ಎಸ್‌ಪಿಡಿಯಿಂದ ಅನುಮೋದಿಸಲ್ಪಟ್ಟ ಸಂಸ್ಥೆಗಳಿಂದ, ಖರೀದಿಸಿರುವುದಿಲ್ಲವೆಂದು ಹಾಗೂ ಖರೀದಿಸಿದ ಸಾಮಾಗ್ರಿಗಳ ಗುಣಮಟ್ಟ ಕಳಪೆಮಟ್ಟದ್ದಾಗಿದೆ ಎಂದು ಹೇಳಲಾಗಿರುವ ಪ್ರಯುಕ್ತ ಸಾಮಗ್ರಿಗಳನ್ನು ನಿಯಮಾನುಸಾರ ಪರಿಶೀಲಿಸಿ ಖರೀದಿಸಿರುವುದಿಲ್ಲವೆಂದು ಸರ್ಕಾರವು ನಿರ್ಣಯಿಸಿ ಕೆಸಿಎಸ್ (ಸಿಸಿಎ) ನಿಯಮಗಳ ನಿಯಮ-11 (ಎ) ರಂತೆ ತನ್ನ ನಿರ್ಣಯಗಳನ್ನು ದಾಖಲಿಸಿ ಆಪಾದಿತರುಗಳಿಗೆ ಎರಡನೇ ಕಾರಣ ಕೇಳುವ ನೋಟಿಸ್‌ನ್ನು ಮೇಲೆ ಓದಲಾದ ಕ್ರಮ ಸಂಖ್ಯೆ: (5)ರ ಪ್ರಕಾರ ಜಾರಿ ಮಾಡಲಾಗಿತ್ತು. ಆಪಾದಿತರುಗಳು ಲಿಖಿತ ಹೇಳಿಕೆ ಸಲ್ಲಿಸಿ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದ್ದರು. ಶಿಸ್ತು ಪ್ರಾಧಿಕಾರವು ಸದರಿ ಹೇಳಿಕೆಗಳನ್ನು ಪರಿಶೀಲಿಸಿದಾಗ ಅವುಗಳಲ್ಲಿ ಪರಿಗಣಿಸಬಹುದಾದ ಯಾವುದೇ ಅಂಶಗಳು ಕಂಡು ಬರಲಿಲ್ಲವಾದ್ದರಿಂದ ಈ ಪ್ರಕರಣದಲ್ಲಿ ಆಪಾದಿತರ ಮೇಲೆ ಸಾಬೀತಾದ ಆರೋಪಗಳ ಪರಿಮಾಣಕ್ಕನುಗುಣವಾಗಿ ಅವರಿಗೆ ದಂಡನೆ ವಿಧಿಸಲು ನಿರ್ಣಯಿಸಿ ಸದರಿ ಆರೋಪಿತ ಅಧಿಕಾರಿಗಳು ನಿವೃತ್ತಿ ಹೊಂದಿರುವುದರಿಂದ ಇವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟವನ್ನು ವಸೂಲು ಮಾಡಲು ಕರ್ನಾಟಕ ಲೋಕಸೇವಾ ಆಯೋಗದ ಅಭಿಪ್ರಾಯವನ್ನು ಕೋರಲಾಗಿತ್ತು. ಆಯೋಗ ವು ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಆದ್ದರಿಂದ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 238 ಇಎನ್‌ಕ್ಯೂ 96, ದಿನಾಂಕ: 25ನೇ ಜನವರಿ, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ.ಗುರುಣ್ಣ ಕೊಳ್ಳೂರ, ಅಂದಿನ ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ),ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಬೀದರ್ ಮತ್ತು ಶ್ರೀ.ಕಾಶಿನಾಥ, ಸಹಾಯಕ ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ) ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ ಬಸವ ಕಲ್ಯಾಣ ಇವರುಗಳ ಮೇಲೆ ಸಾಬೀತಾದ ಆರೋಪಗಳಿಗನುಗುಣವಾಗಿ ಇವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟವನ್ನು ಸರಿದೂಗಿಸಲು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ-214ರಂತೆ ಇವರುಗಳ ನಿವೃತ್ತಿ ವೇತನದಿಂದ ಶೇಕಡ 25 ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಪಿ.ಆರ್. 168(ಎ)

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ಸುರೇಶ್ ಎಂ. ಪಾಟೀಲ್, ಔಷಧ ಪರಿವೀಕ್ಷಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರು ಅನಧಿಕೃತ ಗೈರು ಹಾಜರಿಯಾಗಿರುವುದರಿಂದ ಸೇವೆಯಿಂದ ವಜಾ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಷೋಕಾಸ್ ನೋಟೀಸ್ ಸಂಖ್ಯೆ: ಆಕುಕ 49 ಐಎಂಎಂ 2004 ದಿನಾಂಕ: 16.04.2004.
2. ಸರ್ಕಾರದ ಪತ್ರ ಸಂಖ್ಯೆ: ಆಕುಕ 49 ಐಎಂಎಂ 2004, ದಿನಾಂಕ: 15.10.2004.

**ಪ್ರಸ್ತಾವನೆ:**

ಶ್ರೀ ಸುರೇಶ್ ಎಂ. ಪಾಟೀಲ್, ಔಷಧ ಪರಿವೀಕ್ಷಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರು ದಿನಾಂಕ:12.03.2001ರಿಂದ ದಿನಾಂಕ: 24.03.2001ರವರೆಗೆ ರಜೆ ಅರ್ಜಿ ಸಲ್ಲಿಸಿ ರಜೆ ಅವಧಿ ಮುಗಿದ ನಂತರ ಕರ್ತವ್ಯಕ್ಕೆ ಹಾಜರಾಗದೇ, ಇಲ್ಲಿಯವರೆವಿಗೂ ಅನಧಿಕೃತ ಗೈರು ಹಾಜರಿಯಾಗಿರುವರು. ಇವರಿಗೆ ದಿನಾಂಕ: 14.05.2001, ದಿನಾಂಕ: 06.06.2001 ಮತ್ತು ದಿನಾಂಕ: 03.07.2001ರಂದು ಕರ್ತವ್ಯಕ್ಕೆ ಹಾಜರಾಗಲು ಮರು ಕರೆ ನೋಟೀಸನ್ನು ಔಷಧ ನಿಯಂತ್ರಕರು ಕಳುಹಿಸಿದ್ದರೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ನಂತರ ರಾಜ್ಯದಲ್ಲಿ ಹೆಚ್ಚು ಪ್ರಚಲಿತವಿರುವ ದಿನಪತ್ರಿಕೆ "ಸಂಯುಕ್ತ ಕರ್ನಾಟಕ" ದಲ್ಲಿ ದಿನಾಂಕ: 13.02.2002ರಂದು ದಿನಾಂಕ: 09.01.2004ರಂದು ಎರಡು ಬಾರಿ ಪ್ರಕಟಣೆ ನೀಡಿ ಕರ್ತವ್ಯಕ್ಕೆ ಹಾಜರಾಗಲು ಸೂಚಿಸಿದ್ದರೂ ಕೂಡಾ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ.

ಆದ್ದರಿಂದ ಸದರಿಯವರ ಅನಧಿಕೃತ ಗೈರು ಹಾಜರಾದ ಆರೋಪದ ಬಗ್ಗೆ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಉದ್ದೇಶಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ಅಡಿಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ: (1) ರಲ್ಲಿನ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿ ಇತ್ಯಾದಿಗಳೊಡನೆ ಅವರ ಖಾಯಂ ವಿಳಾಸವಾದ "ನಂ. 837, 4ನೇ ಬಿ ಕ್ರಾಸ್, ಕಲ್ಯಾಣ ನಗರ, 1ನೇ ಬ್ಲಾಕ್, ಬೆಂಗಳೂರು" ಇಲ್ಲಿ ಜಾರಿ ಮಾಡಲು ನೋಂದಣಿ ಅಂಚೆ ಮೂಲಕ ರವಾನಿಸಲಾಗಿತ್ತು. ಸದರಿಯವರು ಈ ಲಕೋಟೆಯನ್ನು ಸ್ವೀಕರಿಸದೇ ತಿರಸ್ಕರಿಸಿರುವುದಾಗಿ ಅಂಚೆ ಪ್ರಾಧಿಕಾರವು ತಿಳಿಸಿ ಲಕೋಟೆಯನ್ನು ಹಿಂತಿರುಗಿಸಿರುತ್ತದೆ. ನಂತರ ಔಷಧ ನಿಯಂತ್ರಕರ ಮುಖಾಂತರ ಈ ನೋಟೀಸನ್ನು ಜಾರಿ ಮಾಡಿರುವರು, ಆದ್ದಾಗ್ಯೂ ಶ್ರೀ ಸುರೇಶ್ ಎಂ. ಪಾಟೀಲ್ ಅವರಿಂದ ಯಾವುದೇ ಹೇಳಿಕೆ: ಪ್ರತಿಕ್ರಿಯೆ ಸರ್ಕಾರದಲ್ಲಾಗಲೀ ಅಥವಾ ಔಷಧ ನಿಯಂತ್ರಣ ಇಲಾಖೆಯಲ್ಲಾಗಲೀ ನಿಗದಿತ ಅವಧಿಯೊಳಗೆ ಸ್ವೀಕರಿಸಿರುವುದಿಲ್ಲ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿನ ಪತ್ರದಲ್ಲಿ ಸದರಿಯವರಿಗೆ ಕೊನೆಯ ಅವಕಾಶ ನೀಡಿ ಒಂದು ವಾರದೊಳಗಾಗಿ ಲಿಖಿತ ಉತ್ತರಗಳನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಹಾಗೂ ರಕ್ಷಣಾ ಹೇಳಿಕೆಯನ್ನು ನಿಗದಿತ ಅವಧಿಯೊಳಗೆ ಸರ್ಕಾರಕ್ಕೆ ಸಲ್ಲಿಸದೇ ಹೋದಲ್ಲಿ ತಮ್ಮ ಹೇಳಿಕೆಯೇನೂ ಇಲ್ಲವೆಂದು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ಪ್ರಕಾರ ಮುಂದಿನ

ಕ್ರಮ ಕೈಗೊಳ್ಳಲಾಗುವುದೆಂದು ಸದರಿಯವರಿಗೆ ಸೂಚಿಸಿ, ಸದರಿ ಪತ್ರವನ್ನು ನೋಂದಣಿ ಅಂಚೆಯ ಮೂಲಕ ರವಾನಿಸಲಾಗಿತ್ತು. ಸದರಿ ಪತ್ರವನ್ನು ಆರೋಪಿತರ ತಂದೆಯವರಾದ ಶ್ರೀ ಎಂ.ಬಿ. ಪಾಟೀಲ ರವರು ದಿನಾಂಕ: 09.08.2004 ರಂದು ಅವರ ಮಗನ ಪರವಾಗಿ ಸ್ವೀಕರಿಸಿರುತ್ತಾರೆ. ಆದ್ದಾಗ್ಯೂ ಆರೋಪಿತರಿಂದ ಯಾವುದೇ ಹೇಳಿಕೆ/ ಪ್ರತಿಕ್ರಿಯೆ ಸರ್ಕಾರದಲ್ಲಾಗಲೀ ಅಥವಾ ಔಷಧ ನಿಯಂತ್ರಣ ಇಲಾಖೆಯಲ್ಲಾಗಲೀ ನಿಗದಿತ ಅವಧಿಯೊಳಗೆ ಸ್ವೀಕರಿಸಿರುವುದಿಲ್ಲ, ಆದುದರಿಂದ ಅವರ ಹೇಳಿಕೆ ಏನು ಇಲ್ಲವೆಂದು ಭಾವಿಸಿ ನಿಯಮಾನುಸಾರ ಮುಂದಿನ ಸೂಕ್ತ ಕ್ರಮ ಜರುಗಿಸಲಾಗಿದೆ. ಅನಧಿಕೃತ ಗೈರು ಹಾಜರಿಯು ಮೂರು ವರ್ಷಗಳಿಗೂ ಅಧಿಕವಾಗಿರುವುದರಿಂದ ಮತ್ತು ಇದು ದೃಢಪಟ್ಟಿದ್ದರಿಂದ ಶ್ರೀ ಸುರೇಶ್ ಎಂ. ಪಾಟೀಲ್ ಇವರನ್ನು ಸದರಿ ನಿಯಮಾವಳಿಗಳ ನಿಯಮ 8 (viii)ರ ಅಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 49 ಐಎಂಎಂ 2002, ಬೆಂಗಳೂರು, ದಿನಾಂಕ: 24ನೇ ಜನವರಿ, 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8 (viii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ದಿನಾಂಕ: 12.03.2001ರಿಂದ ಇಲ್ಲಿಯವರೆಗೆ ಅನಧಿಕೃತ ಗೈರು ಹಾಜರಿಯಲ್ಲಿರುವ ಶ್ರೀ ಸುರೇಶ್ ಎಂ. ಪಾಟೀಲ್, ಔಷಧ ಪರಿವೀಕ್ಷಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಕೆ. ತೆಗ್ಗಿನಮನಿ**

ಪಿ.ಆರ್.169

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಕಲಂ 29 ಎಫ್(1), (4), (5) ಮತ್ತು (6)ನ್ನು ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘ ನಿ., ಶಿವಮೊಗ್ಗ ಇದಕ್ಕೆ ಸಂಬಂಧಿಸಿದಂತೆ ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ :** ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘ ನಿ., ಶಿವಮೊಗ್ಗ ಇದರ ಉಪಾಧ್ಯಕ್ಷರ ಪತ್ರ ದಿನಾಂಕ: 22.12.2004.

**ಪ್ರಸ್ತಾವನೆ:**

ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘ ನಿ., ಶಿವಮೊಗ್ಗ ಇದು 1939ರಲ್ಲಿ ಪ್ರಾರಂಭಗೊಂಡಿದ್ದು, ಈಗ "ಮ್ಯಾಮಕೋಸ್" ಎಂಬ ಜನಪ್ರಿಯ ಸಂಕ್ಷಿಪ್ತ ನಾಮದೊಂದಿಗೆ ಪ್ರಸಿದ್ಧಿ ಪಡೆದಿದೆ. ಇದರ ಬೈಲಾ ಪ್ರಕಾರ ಶಿವಮೊಗ್ಗ ಜಿಲ್ಲಾಧಿಕಾರಿಯವರು ಸಂಘದ ಪದನಿಮಿತ್ತ ಅಧ್ಯಕ್ಷರಾಗಿರುತ್ತಾರೆ. ಕನಾಟಕ ಸಹಕಾರ ಸಂಘಗಳ ಅಧಿನಿಯಮ, 1959ಕ್ಕೆ ತಿದ್ದುಪಡಿ ಆಗಿ ದಿನಾಂಕ: 15.08.1998ರಿಂದ ಜಾರಿಗೆ ಬಂದ ಪ್ರಕಾರ ಸಹಕಾರ ಸಂಘಗಳಲ್ಲಿ "ಪದನಿಮಿತ್ತ ಅಧ್ಯಕ್ಷತೆಗೆ" ಅವಕಾಶವಿರುವುದಿಲ್ಲ. ಆದರೆ ಚುನಾವಣೆ ಮೂಲಕವೇ ಆರಿಸಲ್ಪಡುವ ನಿರ್ದೇಶಕರಲ್ಲಿ ಸಂಘದ ಅತ್ಯಂತ ಉನ್ನತ ಹಾಗೂ ಪ್ರತಿಷ್ಠಿತ ಸ್ಥಾನಕ್ಕಾಗಿ ಅನಾರೋಗ್ಯಕರ ಸ್ಪರ್ಧೆ ಏರ್ಪಟ್ಟು, ಸಂಘದ ಮೂಲ ಉದ್ದೇಶಕ್ಕೆ ಧಕ್ಕೆ ಬರಬಾರದೆಂಬ ಆಶಯ ಹಾಗೂ ನಿರೀಕ್ಷೆಯಿಂದ ದಿನಾಂಕ: 27.02.1999ರಂದು ಸೇರಿದ್ದ ಸಂಘದ ವಿಶೇಷ ಮಹಾಸಭೆಯು ಶಿವಮೊಗ್ಗ ಜಿಲ್ಲಾಧಿಕಾರಿಯವರೇ ಸಂಘದ ಅಧ್ಯಕ್ಷರಾಗಿರಬೇಕೆಂದು ತೀರ್ಮಾನಿಸಿದೆ. ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 29 ಎಫ್ ಪ್ರಕಾರ ತಮ್ಮೊಳಗೆ ಒಬ್ಬರು ಸಂಘದ ಅಧ್ಯಕ್ಷರಾಗಿ ಆಯ್ಕೆ ಆಗುವ ಅವಕಾಶ ಯಥೇಚ್ಛವಾಗಿ ಹಾಗೂ ಮುಕ್ತವಾಗಿ ಲಭ್ಯವಿದ್ದರೂ ಸಂಘದ ಸದಸ್ಯರು ಸಂಘದ ಒಟ್ಟಾರೆ ಹಿತದೃಷ್ಟಿಯಿಂದ ಶಿವಮೊಗ್ಗ ಜಿಲ್ಲಾಧಿಕಾರಿಗಳನ್ನೇ ಸಂಘದ ಪದನಿಮಿತ್ತ ಅಧ್ಯಕ್ಷರಾಗಿ ಮುಂದುವರೆಸಲು ಆಗ್ರಹಿಸಿ ಉನ್ನತ ನಾಯಕ ಸ್ಥಾನವನ್ನು ವಿವಾದಾತೀತವಾಗಿ ಉಳಿಸಿಕೊಂಡು ಹಾಗೂ ಬೆಳೆಸಿಕೊಂಡು ಬಂದಿರುವುದು ಸಂಘದ ಸದಸ್ಯರ ವೈಶಿಷ್ಟ್ಯಪೂರ್ಣವಾಗಿರುತ್ತದೆ. ಇಂತಹ ವಿಶೇಷ ವ್ಯವಸ್ಥೆಯನ್ನು ಹೊಂದಿರುವ ಸಂಘವು ಕಳೆದ 3-4 ವರ್ಷಗಳಿಂದಲೂ ರೂ.1.50 ಕೋಟಿಗೂ ಹೆಚ್ಚು ಲಾಭ ಗಳಿಸುತ್ತಾ ಸದಸ್ಯರಿಗೆ ಶೇ.15ರ ಗರಿಷ್ಠ ದರದಲ್ಲಿ ಡಿವಿಡೆಂಡ್‌ನ್ನು ಹಂಚುತ್ತಾ ಅತ್ಯುತ್ತಮ ಸಂಘವೆಂದು ಖ್ಯಾತಿಯನ್ನು ಗಳಿಸಿದೆ. ಈ ವ್ಯವಸ್ಥೆಯ ಭಾಗವಾಗಿಯೇ ಶಿವಮೊಗ್ಗ ಜಿಲ್ಲಾಧಿಕಾರಿಯವರು ಸಂಘದ ಪದನಿಮಿತ್ತ ಅಧ್ಯಕ್ಷರಾಗಿರುತ್ತಾರೆ. ಆದರೆ ತಿದ್ದುಪಡಿ ಕಾಯ್ದೆಯಿಂದಾಗಿ 'ಪದನಿಮಿತ್ತ ಅಧ್ಯಕ್ಷತೆ'ಯ ಅವಕಾಶ ಸಂಘಕ್ಕೆ ತಪ್ಪಿರುತ್ತದೆ. ಆದುದರಿಂದ, ಚುನಾವಣೆಯ ನಂತರ ಆಡಳಿತ ಮಂಡಳಿಯು ಆಯ್ಕೆಯಾದಾಗ ಹಾಗೂ ಪ್ರತಿ ಎರಡೂವರೆ ವರ್ಷಕ್ಕೊಮ್ಮೆ ಅಧ್ಯಕ್ಷರನ್ನು ಚುನಾಯಿಸಬೇಕೆಂಬ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 29 ಎಫ್(4)ರ ನಿಬಂಧನೆಯಿಂದ ವಿನಾಯ್ತಿ ನೀಡಿ ಶಿವಮೊಗ್ಗ ಜಿಲ್ಲಾಧಿಕಾರಿಯವರು ಸಂಘದ ಖಾಯಂ ಅಧ್ಯಕ್ಷರಾಗಿ ಮುಂದುವರೆಯುವಂತೆ ಅವಕಾಶ ಮಾಡುವ ಸಲುವಾಗಿ ಪ್ರಕರಣ 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆದೇಶ ಹೊರಡಿಸುವಂತೆ ಸಂಘದ ಉಪಾಧ್ಯಕ್ಷರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಮಲೆನಾಡು ಅಡಿಕೆ ಮಾರಾಟ ಸಹಕಾರ ಸಂಘ ನಿ. ಶಿವಮೊಗ್ಗ ಇದರ ಉಪಾಧ್ಯಕ್ಷರ ಪ್ರಸ್ತಾವವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 225 ಸಿಎಲ್‌ಎಂ 2004, ಬೆಂಗಳೂರು, ದಿನಾಂಕ: 22ನೇ ಜನವರಿ 2005**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 29 ಎಫ್ (1), (4), (5) ಮತ್ತು (6)ರ ಉಪಬಂಧಗಳು ಅಧ್ಯಕ್ಷರ ಚುನಾವಣೆಗೆ ಸಂಬಂಧಪಟ್ಟಂತೆ ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘ ನಿ., ಶಿವಮೊಗ್ಗ ಇದಕ್ಕೆ ಅನ್ವಯವಾಗತಕ್ಕದ್ದಲ್ಲವೆಂದು ನಿರ್ದೇಶಿಸುತ್ತದೆ. ಈ ವಿನಾಯಿತಿಯು ಮುಂದಿನ ಆದೇಶದವರೆಗೆ ಜಾರಿಯಲ್ಲಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್.170

ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕಾನೂನು ಇಲಾಖೆಯ ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ಸರ್ಕಾರದ ಅಪರ ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸುವ ಬಗ್ಗೆ.

**ಓದಲಾಗಿದೆ :**
1. ಅಧಿಸೂಚನೆ ಸಂಖ್ಯೆ: ಸಿಆಸುಇ 366 ಸಅಸೇ 2004, ದಿನಾಂಕ: 14.12.2004.
2. ರಿಜಿಸ್ಟ್ರಾರ್ ಜನರಲ್ ರವರ ಪತ್ರ ಸಂಖ್ಯೆ: ಜಿಒಬಿ (1) 1 2005, ದಿನಾಂಕ: 12.01.2005.
3. ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಲಾ 15 ಕಾ 2005, ದಿನಾಂಕ: 12.01.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಡಿಸೋಜಾ ರಾಬಿನ್‌ಸನ್, ಸರ್ಕಾರದ ವಿಶೇಷ ಕಾರ್ಯದರ್ಶಿ, ಕಾನೂನು ಇಲಾಖೆ ರವರನ್ನು ಶ್ರೀ ಜವಾದ ರಹೀಂ ರವರ ವರ್ಗಾವಣೆಯಿಂದ ತೆರವಾದ ಸರ್ಕಾರದ ಕಾರ್ಯದರ್ಶಿ ಹುದ್ದೆಗೆ ಕ.ನಾ.ಸೇ. (ಸಾ.ನೇ.) ನಿಯಮಗಳ ನಿಯಮ 16(ಎ) (11) ಅನ್ವಯ ವರ್ಗಾಯಿಸಿ ನೇಮಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ರಿಜಿಸ್ಟ್ರಾರ್ ಜನರಲ್ ರವರು ಉಚ್ಚ ನ್ಯಾಯಾಲಯದ ಅಧಿಸೂಚನೆ ಪ್ರತಿಯನ್ನು ಕಳುಹಿಸಿ ಪ್ರಸ್ತುತ ಮುಖ್ಯ ನ್ಯಾಯಾಧೀಶರ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಹಾಗೂ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಮೂಸೆ ಕುನ್ನಿ ನಾಯರ್ ಮೂಲೆ ರವರನ್ನು ಸರ್ಕಾರದ ಅಪರ ಕಾರ್ಯದರ್ಶಿ, ಕಾನೂನು ಇಲಾಖೆ ಇಲ್ಲಿಗೆ ನೇಮಿಸಲು ಪ್ರಸ್ತಾವನೆ ಕಳುಹಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ ರವರು ಮೇಲೆ ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಪ್ರಸ್ತುತ ಖಾಲಿ ಇರುವ ಸರ್ಕಾರದ ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ಅಪರ ಕಾರ್ಯದರ್ಶಿ ಹುದ್ದೆಗೆ ನಿಮ್ನೀಕರಿಸಿ ಸದರಿ ಹುದ್ದೆಯಲ್ಲಿ ಶ್ರೀ ಮೂಸೆ ಕುನ್ನಿ ನಾಯರ್ ಮೂಲೆ, ಜಿಲ್ಲಾ ನ್ಯಾಯಾಧೀಶರು ರವರನ್ನು ನೇಮಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 22 ಸಅಸೇ 2005 (1), ಬೆಂಗಳೂರು, ದಿನಾಂಕ: 17ನೇ ಜನವರಿ, 2005**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಕಾನೂನು ಇಲಾಖೆಯಲ್ಲಿ ಅಸ್ತಿತ್ವದಲ್ಲಿರುವ ಸರ್ಕಾರದ ವಿಶೇಷ ಕಾರ್ಯದರ್ಶಿ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಅಪರ ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್.171

## ಸುತ್ತೋಲೆ

**ಸಂಖ್ಯೆ: ಸಿಆಸುಇ 41 ಸೇಸ್ಥಅ 2004, ಬೆಂಗಳೂರು, ದಿನಾಂಕ: 28ನೇ ಜನವರಿ, 2005**

**ವಿಷಯ :** ದಿನಾಂಕ: 01.07.84ರ ನಂತರ ನೇಮಕಾತಿ ಹೊಂದಿರುವ ದಿನಗೂಲಿ ನೌಕರರು- ನ್ಯಾಯಾಲಯದ ಮುಂದಿರುವ ಪ್ರಕರಣಗಳಲ್ಲಿ ಅನುಸರಿಸಬೇಕಾದ ಕ್ರಮದ ಬಗ್ಗೆ- ಸೂಚನೆಗಳು.

ಸರ್ವೋಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 8307-11:83 ರಲ್ಲಿ ದಿನಾಂಕ: 23.02.1990ರಂದು ನೀಡಿದ ತೀರ್ಪಿನಲ್ಲಿ ರಾಜ್ಯ ಸರ್ಕಾರದ ವಿವಿಧ ಇಲಾಖೆಗಳಲ್ಲಿ ದಿನಾಂಕ: 01.07.84ರಂದು ಅಥವಾ ಅದಕ್ಕಿಂತ ಹಿಂದೆ ತೊಡಗಿಸಲಾದ ಹಾಗೂ 10 ವರ್ಷಗಳ ಸತತ ಸೇವೆ ಸಲ್ಲಿಸಿದ ಸಾಂದರ್ಭಿಕ; ದಿನಗೂಲಿ ನೌಕರರ ಸೇವೆಯನ್ನು ಸಕ್ರಮಗೊಳಿಸಬೇಕೆಂದು ರಾಜ್ಯ ಸರ್ಕಾರಕ್ಕೆ ಆದೇಶ ನೀಡಿದ್ದ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 2 ಎಸ್‌ಎಲ್‌ಸಿ 90, ದಿನಾಂಕ: 06.08.1990ರಲ್ಲಿ ಈ ಬಗ್ಗೆ ಸೂಚನೆ ನೀಡಲಾಗಿದೆ. ಸರ್ವೋಚ್ಚ ನ್ಯಾಯಾಲಯದ ಮೇಲ್ಕಂಡ ದಿನಾಂಕ: 23.02.1990ರ ತೀರ್ಪಿನ ಪ್ರಕಾರ ದಿನಾಂಕ: 01.07.84ರ ನಂತರ ತೊಡಗಿಸಲಾದ ದಿನಗೂಲಿ ನೌಕರರ ಸೇವೆಯನ್ನು ಸಕ್ರಮಗೊಳಿಸಲು ಆಸ್ಪದವಿರುವುದಿಲ್ಲ.

ಕರ್ನಾಟಕ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠವು ರಿಟ್ ಮೇಲ್ಮನವಿ ಸಂಖ್ಯೆ: 120 ಮತ್ತು 128-329/1999ರಲ್ಲಿ ದಿನಾಂಕ: 01.02.2001ರಂದು ನೀಡಿರುವ ತೀರ್ಪಿನಲ್ಲಿ ದಿನಾಂಕ: 01.07.84ರ ನಂತರ ನೇಮಕಾತಿ ಹೊಂದಿರುವ ದಿನಗೂಲಿ ನೌಕರರ ಸೇವೆಯನ್ನು ಸಕ್ರಮ ಗೊಳಿಸಲು ಅವಕಾಶವಿಲ್ಲವೆಂದು ತೀರ್ಪನ್ನು ನೀಡಿದೆ. ಈ ತೀರ್ಪಿನ ವಿರುದ್ಧ ಕರ್ನಾಟಕ ಕ್ಯಾಷುಯಲ್ ಮತ್ತು ಡೈಲಿ ರೇಟೆಡ್ ವರ್ಕರ್ಸ್ ಯೂನಿಯನ್ ಹುಬ್ಬಳ್ಳಿ ಸರ್ವೋಚ್ಚ ನ್ಯಾಯಾಲಯದಲ್ಲಿ ಎಸ್‌ಎಲ್‌ಪಿ ಸಂಖ್ಯೆ: 3112-3314/2001ನ್ನು ಸಲ್ಲಿಸಿದ್ದು (ಸಿವಿಲ್ ಅಪೀಲು ಸಂಖ್ಯೆ: 1861-2063/2001) ಈ ಪ್ರಕರಣವು ಸಿವಿಲ್ ಅಪೀಲು ಸಂಖ್ಯೆ: 3595-3612/ 1999 ಕರ್ನಾಟಕ ಸರ್ಕಾರ ಮತ್ತು ಇತರರು ವಿರುದ್ಧ ಉಮಾ ದೇವಿ ಮತ್ತು ಇತರರು ಪ್ರಕರಣದೊಂದಿಗೆ ಸರ್ವೋಚ್ಚ ನ್ಯಾಯಾಲಯದ ಐದು ನ್ಯಾಯಾಧೀಶರ ಪೀಠದ ಮುಂದಿದೆ.

ದಿನಾಂಕ: 01.07.84ರ ನಂತರ ನೇಮಕಾತಿ ಹೊಂದಿರುವ ದಿನಗೂಲಿ ನೌಕರರು ಸೇವೆಯನ್ನು ಸಕ್ರಮಗೊಳಿಸುವ ಕುರಿತು ನಿರ್ದೇಶನ ನೀಡುವಂತೆ ಕೋರಿ ನ್ಯಾಯಾಲಯದಲ್ಲಿ/ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸಲ್ಲಿಸಿರುವ ಅರ್ಜಿಗಳಿಗೆ/ ರಿಟ್ ಅರ್ಜಿಗಳಿಗೆ ಸಂಬಂಧಿಸಿದಂತೆ ಆಕ್ಷೇಪಣಾ ಹೇಳಿಕೆ/ ಕಂಡಿಕೆವಾರು ಉತ್ತರವನ್ನು ತಯಾರಿಸುವಾಗ ಮೇಲ್ಕಂಡ ಅಂಶಗಳನ್ನು ಹಾಗೂ ದಿನಾಂಕ: 01.07.84ರ ನಂತರ ನೇಮಕಾತಿ ಹೊಂದಿರುವ ದಿನಗೂಲಿ ನೌಕರರ ಸೇವೆಯನ್ನು ಸಕ್ರಮಗೊಳಿಸಲು ಸಾಧ್ಯವಿಲ್ಲವೆಂದು ಸರ್ಕಾರವು ತಳೆದಿರುವ ನಿಲುವು ಮತ್ತು ದಿನಗೂಲಿ ನೌಕರರ ಸಕ್ರಮಾತಿ ಕುರಿತ ಸಾಮಾನ್ಯ ವಿಷಯ (general issue)ವು ಈಗ ಸುಪ್ರೀಂಕೋರ್ಟಿನ ಮುಂದಿದೆ ಎಂಬ ಅಂಶಗಳನ್ನು ಕಡ್ಡಾಯವಾಗಿ ಸೇರ್ಪಡೆ ಮಾಡಲು ಮತ್ತು ಸರ್ಕಾರಿ ವಕೀಲರಿಗೆ ಈ ಬಗ್ಗೆ ಮಾಹಿತಿಯನ್ನು ಸದರಿ ದಿನಗೂಲಿ ನೌಕರರು ಸೇವೆ ಸಲ್ಲಿಸುತ್ತಿರುವ ಇಲಾಖೆಯಲ್ಲಿನ ಸಂಬಂಧಿಸಿದ ಅಧಿಕಾರಿಗಳು/ ಪ್ರತಿವಾದಿಗಳು ತಪ್ಪದೇ ಒದಗಿಸಲು ಸೂಕ್ತ ಕ್ರಮ ತೆಗೆದುಕೊಳ್ಳಲು ಸೂಚಿಸಿದೆ.

ದಿನಾಂಕ: 01.07.84ರ ನಂತರ ನೇಮಕಾತಿ ಹೊಂದಿರುವ ದಿನಗೂಲಿ ನೌಕರರ ಪ್ರಕರಣಗಳಲ್ಲಿ ನ್ಯಾಯಾಲಯಗಳ ತೀರ್ಪು ಹೊರಬಿದ್ದ ನಂತರ ಅವುಗಳ ದೃಢೀಕೃತ ಪ್ರತಿಗಳನ್ನು ಪಡೆಯಲು ಕೂಡಲೇ ಕ್ರಮ ತೆಗೆದುಕೊಂಡು ನ್ಯಾಯಾಲಯದ ಆದೇಶವನ್ನು/ ತೀರ್ಪನ್ನು ಕೂಲಂಕುಷವಾಗಿ ಪರಿಶೀಲಿಸಿ ಸದರಿ ತೀರ್ಪು ಸರ್ಕಾರದ ನಿಲುವಿಗೆ ವಿರುದ್ಧವಾಗಿದ್ದಲ್ಲಿ ನಿಗದಿತ ಅವಧಿಯೊಳಗೆ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಲು ಮೇಲ್ಕಂಡ

ದಿನಗೂಲಿ ನೌಕರರು ಸೇವೆಯಲ್ಲಿರುವ ಇಲಾಖೆಯಲ್ಲಿನ ಸಂಬಂಧಿಸಿದ ಅಧಿಕಾರಿಗಳು/ ಪ್ರತಿವಾದಿಗಳು ಸೂಕ್ತ ಕ್ರಮವನ್ನು ತೆಗೆದುಕೊಳ್ಳತಕ್ಕದ್ದೆಂದು ಸೂಚಿಸಲಾಗಿದೆ. ಈ ವಿಚಾರದಲ್ಲಿ ಅನಗತ್ಯ ವಿಳಂಬ ಮಾಡಿರುವುದು ಹಾಗೂ ಕ್ರಮ ಜರುಗಿಸದೇ ಇರುವುದು ಸರ್ಕಾರದ ಗಮನಕ್ಕೆ ಬಂದಲ್ಲಿ ಸಂಬಂಧಿಸಿದ ಅಧಿಕಾರಿಗಳ ವಿರುದ್ಧ ಶಿಸ್ತಿನ ಕ್ರಮ ಜರುಗಿಸಲಾಗುವುದು.

**ತಾರಾ ಅಜಯ್‌ಸಿಂಹ**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

ಪಿ.ಆರ್.172

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಪುನರ್‌ರಚನೆ ಹಿನ್ನೆಲೆಯಲ್ಲಿ ಅಧಿಕಾರಿ/ನೌಕರರುಗಳಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆ ಸೌಲಭ್ಯದ ಅಡಿ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ:ವಾಕೈ 169 ಕೈಸೇವಿ 2003, ದಿನಾಂಕ:27–10–2003 ಮತ್ತು 30–04–2004.
2. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಸೇಇವಿ 2003, ದಿನಾಂಕ:17–05–2004.
3. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಸೇಇವಿ 2003, ದಿನಾಂಕ:21–06–2004.
4. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 15 ಸೇಇವಿ 2003, ದಿನಾಂಕ:08–09–2004.
5. ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ರವರ ಪತ್ರ ಸಂಖ್ಯೆ:ಆಡಳಿತ: ಸಿಬ್ಬಂದಿ:ಇ–5:90:2004–05, ದಿನಾಂಕ:28–01–2004 ಹಾಗೂ ಅವರ ಅಂತಿಮ ಪತ್ರ ದಿನಾಂಕ:08–12–2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶಗಳಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯನ್ನು ಪುನರ್‌ರಚಿಸಿ ವಿವಿಧ ವೃಂದಗಳಲ್ಲಿ ಹಲವಾರು ಅಧಿಕಾರಿ/ನೌಕರರನ್ನು "ಹೆಚ್ಚುವರಿ" ಎಂದು ಗುರುತಿಸಲಾಗಿದ್ದು, ಇದಕ್ಕನುಗುಣವಾಗಿ ಇಲಾಖೆಯಲ್ಲಿ ಸದರಿ ವೃಂದದಲ್ಲಿನ ವಿವಿಧ ಹುದ್ದೆಗಳನ್ನು ರದ್ದುಪಡಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ರಾಜ್ಯ ಸರ್ಕಾರದ ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ಸೌಲಭ್ಯ ಪಡೆಯಲು ಅವಕಾಶ ಕಲ್ಪಿಸಲಾಗಿದೆ. ನಂತರ, ಸದರಿ ಆದೇಶಕ್ಕೆ ಕ್ರಮ ಸಂಖ್ಯೆ (3) (4)ರ ಆದೇಶಗಳಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಿ ಈ ಯೋಜನೆ ಸೌಲಭ್ಯದ ದಿನಾಂಕವನ್ನು 28–02–2005ರವರೆಗೆ ವಿಸ್ತರಿಸಲಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ವಿವಿಧ ವೃಂದದ ಅಧಿಕಾರಿ/ ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಸೌಲಭ್ಯ ನೀಡುವ ಬಗ್ಗೆ ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ರವರು ಮೇಲೆ ಓದಲಾದ ಕ್ರಮ ಸಂಖ್ಯೆ (5) ರಲ್ಲಿನ ಪತ್ರಗಳಲ್ಲಿ ಅರ್ಹ ಅಧಿಕಾರಿ/ನೌಕರರುಗಳ ಮನವಿಗಳನ್ನು ಪರಿಶೀಲಿಸಿ, ಅವರುಗಳಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಸೌಲಭ್ಯವನ್ನು ನೀಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಯೋಜನೆಯಡಿ ವಿಶೇಷ ಸ್ವಯಂ ನಿವೃತ್ತಿ ಕೋರಿ ಅರ್ಜಿ ಸಲ್ಲಿಸಿದ ಒಟ್ಟು 85 ಮಂದಿ ವಿವಿಧ ವೃಂದದ ನೌಕರರುಗಳ ಪೈಕಿ 12 ಮಂದಿ ನೌಕರರು ಈ ಯೋಜನೆಯ ಸೌಲಭ್ಯವನ್ನು ಪಡೆಯಲು ಅನರ್ಹರೆಂದು ಪರಿಗಣಿಸಿ ಉಳಿದ 73 ಮಂದಿ ಅಧಿಕಾರಿ/ನೌಕರರುಗಳಿಗೆ ಈ ಸೌಲಭ್ಯವನ್ನು ನೀಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ, ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 06 ಕೈನಿವಿ 2004, ಬೆಂಗಳೂರು, ದಿನಾಂಕ: 31ನೇ ಜನವರಿ, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿರುವ ವಿವಿಧ ವೃಂದಗಳಲ್ಲಿನ ಅಧಿಕಾರಿ/ನೌಕರರುಗಳಿಗೆ ದಿನಾಂಕ: 31–01–2005 ರಂದು ಅಪರಾಹ್ನದಿಂದ ಜಾರಿಗೆ ಬರುವಂತೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಲು ಸರ್ಕಾರದ ಅನುಮತಿ ನೀಡಲಾಗಿದೆ.

ಈ ಯೋಜನೆಯಡಿ ನಿವೃತ್ತಿ ಹೊಂದುವ ಅಧಿಕಾರಿ/ನೌಕರರುಗಳ ವಿಶೇಷ ಸ್ವಯಂ ನಿವೃತ್ತಿಯ ವೆಚ್ಚವನ್ನು 2004–05ನೇ ಸಾಲಿನ SE–2, ಲೆಕ್ಕಶೀರ್ಷಿಕೆ 2071–01–200–2–01 Ex-gratia under Special VRS ಅಡಿಯಲ್ಲಿ ಒದಗಿಸಿರುವ ಹೆಚ್ಚುವರಿ ಅನುದಾನ ರೂ.4.84 ಕೋಟಿಗಳಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ:ಎಫ್‌ಡಿ 05 ಇಎಕ್ಸ್‌ಪಿ–1/2005, ದಿನಾಂಕ:27–01–2005ರನ್ವಯ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪದ್ಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

**ಅನುಬಂಧ**

**ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ವಿಶೇಷ ಸ್ವಯಂ ನಿವೃತ್ತಿ ಯೋಜನೆ ಸೌಲಭ್ಯ ಪಡೆಯಲು ಅನುಮತಿ ನೀಡಲಾದ ಅಧಿಕಾರಿ/ನೌಕರರ ವಿವರ.**

| ಕ್ರಮ ಸಂಖ್ಯೆ | ಅಧಿಕಾರಿ/ನೌಕರರ ಹೆಸರು, ಹುದ್ದೆ, ಕಛೇರಿ ಹಾಗೂ ಸ್ಥಳ ಶ್ರೀಮತಿ/ಶ್ರೀ | ಕ್ರಮ ಸಂಖ್ಯೆ | ಅಧಿಕಾರಿ/ನೌಕರರ ಹೆಸರು, ಹುದ್ದೆ, ಕಛೇರಿ ಹಾಗೂ ಸ್ಥಳ ಶ್ರೀಮತಿ/ಶ್ರೀ |
|---|---|---|---|
| 1. | ಹೆಚ್.ಆರ್.ಶಿವಶಂಕರ್, ಸಹಾಯಕ ನಿರ್ದೇಶಕರು, ವಿಶ್ವೇಶ್ವರಯ್ಯ ಇಂಡಸ್ಟ್ರಿಯಲ್ ಟ್ರೇಡ್ ಸೆಂಟರ್, ಕಸ್ತೂರಬಾ ರಸ್ತೆ, ಬೆಂಗಳೂರು. | 2. | ಯು.ಎನ್.ನಟರಾಜ್, ಸಹಾಯಕ ನಿರ್ದೇಶಕರು, ತಾಲ್ಲೂಕು ಕೈಗಾರಿಕಾ ಕೇಂದ್ರ, ಹಾಸನ. |

| ಕ್ರಮ ಸಂಖ್ಯೆ | ಅಧಿಕಾರಿ/ನೌಕರರ ಹೆಸರು, ಹುದ್ದೆ, ಕಛೇರಿ ಹಾಗೂ ಸ್ಥಳ **ಶ್ರೀಮತಿ/ಶ್ರೀ** | ಕ್ರಮ ಸಂಖ್ಯೆ | ಅಧಿಕಾರಿ/ನೌಕರರ ಹೆಸರು, ಹುದ್ದೆ, ಕಛೇರಿ ಹಾಗೂ ಸ್ಥಳ **ಶ್ರೀಮತಿ/ಶ್ರೀ** |
|---|---|---|---|
| 3. | ಎಂ.ಎಸ್.ಕಂಬಾರ್,<br>ಸಹಾಯಕ ನಿರ್ದೇಶಕರು,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ಹಾಸನ. | 4. | ಡಿ.ಆರ್.ಪಾವಳ್,<br>ಸಹಾಯಕ ನಿರ್ದೇಶಕರು,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ಬೆಳಗಾವಿ. |
| 5. | ಜಿ.ಎಸ್.ಸತ್ಯಮೂರ್ತಿ,<br>ಸಹಾಯಕ ನಿರ್ದೇಶಕರು,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ಚಿಂತಾಮಣಿ. | 6. | ಕೆ.ಪಿ.ಶ್ರೀನಿವಾಸನ್,<br>ಸಹಾಯಕ ನಿರ್ದೇಶಕರು,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ತರಿಕೆರೆ, ಚಿಕ್ಕಮಗಳೂರು ಜಿಲ್ಲೆ. |
| 7. | ಎಂ.ಮರಿಗೌಡ,<br>ಕೈಗಾರಿಕಾ ಉತ್ತೇಜನಾಧಿಕಾರಿ,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ಸುಳ್ಯ. | 8. | ತಿರುಮಲಾಚಾರ್,<br>ಕೈಗಾರಿಕಾ ಉತ್ತೇಜನಾಧಿಕಾರಿ,<br>ಕರ್ನಾಟಕ ರಾಜ್ಯ ತೆಂಗಿನ ನಾರಿನ ಅಭಿವೃದ್ಧಿ ನಿಗಮ, ಹಾಸನ. |
| 9. | ಎಸ್.ಕೆ.ಸೋಮಸುಂದರ್,<br>ಕೈಗಾರಿಕಾ ಉತ್ತೇಜನಾಧಿಕಾರಿ,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ಆಲೂರು. | 10. | ಜಿ.ಎಂ.ಚಿನ್ನೇಗೌಡ,<br>ಕೈಗಾರಿಕಾ ಉತ್ತೇಜನಾಧಿಕಾರಿ,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ಕಾರ್ಕಳ. |
| 11. | ಮಹಮ್ಮದ್ ಬ್ಯಾರಿ,<br>ಕೈಗಾರಿಕಾ ಉತ್ತೇಜನಾಧಿಕಾರಿ,<br>ಜಿಲ್ಲಾ ಕೈಗಾರಿಕಾ ಕೇಂದ್ರ, ಮಂಗಳೂರು. | 12. | ವಿ.ನಟರಾಜ್,<br>ಕೈಗಾರಿಕಾ ಉತ್ತೇಜನಾಧಿಕಾರಿ,<br>ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರು (ನಗರ) |
| 13. | ಎ.ಪಾಪಣ್ಣ,<br>ಅಧೀಕ್ಷಕರು,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ಶಿಡ್ಲಘಟ್ಟ. | 14. | ಎನ್.ಕೆ.ಮಂಜುನಾಥ್,<br>ಅಧೀಕ್ಷಕರು,<br>ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗ. |
| 15. | ಗೌಸ್ ಮೊಯಿದ್ದೀನ್ ಷರೀಫ್,<br>ಪ್ರಥಮ ದರ್ಜೆ ಸಹಾಯಕರು,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ಚಿಕ್ಕಮಗಳೂರು. | 16. | ಷೇಕ್ ಅಹ್ಮದ್,<br>ಪ್ರಥಮ ದರ್ಜೆ ಸಹಾಯಕರು,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ಮೈಸೂರು. |
| 17. | ಯಲ್ಲಪ್ಪ,<br>ಪ್ರಥಮ ದರ್ಜೆ ಸಹಾಯಕರು,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ಗಂಗಾವತಿ. | 18. | ಡಿ.ಪಾರ್ವತಿ,<br>ಪ್ರಥಮ ದರ್ಜೆ ಸಹಾಯಕರು,<br>ಜಿಲ್ಲಾ ಕೈಗಾರಿಕಾ ಕೇಂದ್ರ ವಿಭಾಗ, ಕೇಂದ್ರ ಕಛೇರಿ, ಬೆಂಗಳೂರು. |
| 19. | ಡಿ.ಪಿ.ವೆಂಕಟೇಶ್ ಮೂರ್ತಿ,<br>ಪ್ರಥಮ ದರ್ಜೆ ಸಹಾಯಕರು,<br>ಜಿಲ್ಲಾ ಕೈಗಾರಿಕಾ ಕೇಂದ್ರ, ಬೆಂಗಳೂರು (ಗ್ರಾಮಾಂತರ) | 20. | ಷೇಕ್ ಯೂಸಫ್,<br>ಪ್ರಥಮ ದರ್ಜೆ ಸಹಾಯಕರು,<br>ಕುಶಲಕರ್ಮಿ ತರಬೇತಿ ಸಂಸ್ಥೆ, ಗುಲ್ಬರ್ಗಾ. |
| 21. | ಡಿ.ಸಿ.ಚಂದ್ರೇಗೌಡ,<br>ಪ್ರಥಮ ದರ್ಜೆ ಸಹಾಯಕರು,<br>ಜಿಲ್ಲಾ ಕೈಗಾರಿಕಾ ಕೇಂದ್ರ, ಚಿಕ್ಕಮಗಳೂರು. | 22. | ಮಾರ್ಗರೇಟ್ ಮನೋರಮ,<br>ಪ್ರಥಮ ದರ್ಜೆ ಸಹಾಯಕರು,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ಹರಿಹರ. |
| 23. | ಎಂ.ಯಶೋಧರ,<br>ಶೀಘ್ರಲಿಪಿಗಾರರು, ಜಿಲ್ಲಾಧಿಕಾರಿಯವರ ಕಛೇರಿ,<br>ಬೆಂಗಳೂರು (ನಗರ) ಜಿಲ್ಲೆ. | 24. | ಎಂ.ಶೇಖರಪ್ಪ,<br>ದ್ವಿತೀಯ ದರ್ಜೆ ಸಹಾಯಕರು, ಕೈಮಗ್ಗ ಮತ್ತು ಜವಳಿ ಇಲಾಖೆ,<br>ಚಿಕ್ಕಮಗಳೂರು. |
| 25. | ಕೆ.ಎಸ್.ವಿಶ್ವನಾಥ್,<br>ದ್ವಿತೀಯ ದರ್ಜೆ ಸಹಾಯಕರು,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ಬೇಲೂರು, ಹಾಸನ ಜಿಲ್ಲೆ. | 26. | ಡಿ.ಕೆಂಪಯ್ಯ,<br>ದ್ವಿತೀಯ ದರ್ಜೆ ಸಹಾಯಕರು,<br>ಕುಶಲಕರ್ಮಿ ತರಬೇತಿ ಸಂಸ್ಥೆ, ನಾಗಮಂಗಲ. |
| 27. | ಕೆ.ಎಸ್.ವೆಂಕಟಾಚಾರ್,<br>ಬೋಧಕರು (ಲೋಹೇತರ),<br>ಕುಶಲಕರ್ಮಿ ತರಬೇತಿ ಸಂಸ್ಥೆ, ನಾಗಮಂಗಲ. | 28. | ಹುಚ್ಚಯ್ಯ,<br>ಬೋಧಕರು,<br>ಕುಶಲಕರ್ಮಿ ತರಬೇತಿ ಸಂಸ್ಥೆ, ಹಾಸನ. |
| 29. | ವಿಮಲಾ ಪಾಂಡುರಂಗನಾಯ್ಕ,<br>ಬೋಧಕರು (ನಾರು), ಸ್ವಂತ ವೇತನ ಶ್ರೇಣಿಯಲ್ಲಿ<br>ಪ್ರಥಮ ದರ್ಜೆ ಸಹಾಯಕರು,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ಕುಮಟಾ. | 30. | ಗಣಪತಿ ಗಂಗೊಳ್ಳಿ,<br>ಬೋಧಕರು (ಬಡಗಿ),<br>ಕುಶಲಕರ್ಮಿ ತರಬೇತಿ ಸಂಸ್ಥೆ,<br>ಸಾಗರ, ಶಿವಮೊಗ್ಗ ಜಿಲ್ಲೆ. |
| 31. | ಸೋಮಶೇಖರ್,<br>ಸಹಾಯಕ ಬೋಧಕರು,<br>ಕೈಗಾರಿಕಾ ತರಬೇತಿ ಕೇಂದ್ರ,<br>ನಿರಾಶ್ರಿತರ ಪರಿಹಾರ ಕೇಂದ್ರ ಆವರಣ, ಬೆಂಗಳೂರು. | 32. | ಮಹಮ್ಮದ್ ಇಲಿಯಾಸ್,<br>ಸಹಾಯಕ ಬೋಧಕರು (ಬಡಗಿ),<br>ಕುಶಲಕರ್ಮಿ ತರಬೇತಿ ಸಂಸ್ಥೆ,<br>ಗುಲ್ಬರ್ಗಾ. |

| ಕ್ರಮ ಸಂಖ್ಯೆ | ಅಧಿಕಾರಿ/ನೌಕರರ ಹೆಸರು, ಹುದ್ದೆ, ಕಛೇರಿ ಹಾಗೂ ಸ್ಥಳ ಶ್ರೀಮತಿ/ಶ್ರೀ | ಕ್ರಮ ಸಂಖ್ಯೆ | ಅಧಿಕಾರಿ/ನೌಕರರ ಹೆಸರು, ಹುದ್ದೆ, ಕಛೇರಿ ಹಾಗೂ ಸ್ಥಳ ಶ್ರೀಮತಿ/ಶ್ರೀ |
|---|---|---|---|
| 33. | ಸಿದ್ದಲಿಂಗಪ್ಪ ಪ. ಕಟ್ಟಿ,<br>ಗಣತಿದಾರರು, (ಮರುನೇಮಕಾತಿಯಲ್ಲಿ)<br>ಕೈಮಗ್ಗ ಮತ್ತು ಜವಳಿ ಇಲಾಖೆ, ಕೇಂದ್ರ ಕಛೇರಿ,<br>ಬೆಂಗಳೂರು. | 34. | ಬಿ.ಪಿ.ಬಾಬು,<br>ವಾಹನ ಚಾಲಕರು,<br>ಜಿಲ್ಲಾ ಕೈಗಾರಿಕಾ ಕೇಂದ್ರ,<br>ಮಂಗಳೂರು. |
| 35. | ಟಿ.ಎಂ.ಶಿವಲಿಂಗಪ್ಪ,<br>ವಾಹನ ಚಾಲಕರು,<br>ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು. | 36. | ಯಮನಾಥ್,<br>ವಾಹನ ಚಾಲಕರು,<br>ಜಿಲ್ಲಾ ಕೈಗಾರಿಕಾ ಕೇಂದ್ರ, ಗುಲ್ಬರ್ಗಾ. |
| 37. | ಚಂದ್ರಶೇಖರ,<br>ವಾಹನ ಚಾಲಕರು, ಉಪ ನಿರ್ದೇಶಕರು (ಖಾದಿ<br>ಮತ್ತು ಗ್ರಾಮೋದ್ಯೋಗ) ರವರ ಕಛೇರಿ, ಜಿಲ್ಲಾ<br>ಪಂಚಾಯತ್, ಹಾಸನ. | 38. | ಅಬ್ದುಲ್ ಶುಕೂರ್,<br>ವಾಹನ ಚಾಲಕರು,<br>ಜಿಲ್ಲಾ ಕೈಗಾರಿಕಾ ಕೇಂದ್ರ, ಬೀದರ್. |
| 39. | ಎಸ್.ತಿಪ್ಪೇಸ್ವಾಮಿ,<br>ವಾಹನ ಚಾಲಕರು, ಜಿಲ್ಲಾ ಕೈಗಾರಿಕಾ ಕೇಂದ್ರ,<br>ಚಿತ್ರದುರ್ಗ. | 40. | ಎಲ್.ವಾಸಣ್ಣ,<br>ಗ್ರೂಪ್ ಡಿ ನೌಕರರು, ತಾಲ್ಲೂಕು ಕೈಗಾರಿಕಾ ಕೇಂದ್ರ,<br>ಯಳಂದೂರು, ಚಾಮರಾಜನಗರ ಜಿಲ್ಲೆ. |
| 41. | ಜಿ.ವೆಂಕಟೇಶ ನಾಯ್ಕ,<br>ಗ್ರೂಪ್ ಡಿ ನೌಕರರು, ಕುಶಲಕರ್ಮಿ ತರಬೇತಿ ಸಂಸ್ಥೆ,<br>ಬನ್ನಡ್ಕ, ಮಂಗಳೂರು ಜಿಲ್ಲೆ. | 42. | ಮಹಾಬಲ,<br>ಗ್ರೂಪ್ ಡಿ ನೌಕರರು, ಕುಶಲಕರ್ಮಿ ತರಬೇತಿ ಸಂಸ್ಥೆ,<br>ಸಾಗರ, ಶಿವಮೊಗ್ಗ ಜಿಲ್ಲೆ. |
| 43. | ಪಿ.ಕೆ.ಬಿರಾದಾರ,<br>ಗ್ರೂಪ್ ಡಿ ನೌಕರರು,<br>ಜಿಲ್ಲಾ ಕೈಗಾರಿಕಾ ಕೇಂದ್ರ, ಬಿಜಾಪುರ. | 44. | ಕೆ.ಎಸ್.ದಯಾನಂದ,<br>ಗ್ರೂಪ್ ಡಿ ನೌಕರರು,<br>ನಿರಾಶ್ರಿತರ ಪರಿಹಾರ ಕೇಂದ್ರ, ಬೆಂಗಳೂರು. |
| 45. | ಬಿ.ಡಿ.ಗಂಗಾಧರ,<br>ಜೇನುಕೃಷಿ ಸಂಘಟಕರು, ಮಡಿಕೇರಿ | 46. | ಬಿ.ಎಂ.ಲಿಂಗಪ್ಪ,<br>ಜೇನುಕೃಷಿ ಸಂಘಟಕರು, ಹಾಸನ. |
| 47. | ನರಸಿಂಹ ಮೂರ್ತಿ,<br>ಗ್ರೂಪ್ ಡಿ ನೌಕರರು,<br>ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗ. | 48. | ಚಂದ್ರಪ್ಪ,<br>ಗ್ರೂಪ್ ' ಡಿ ' ನೌಕರರು,<br>ಕುಶಲಕರ್ಮಿ ತರಬೇತಿ ಸಂಸ್ಥೆ, ಹಾಸನ. |
| 49. | ಜಿ.ಜವರಯ್ಯ,<br>ಗ್ರೂಪ್ ' ಡಿ ' ನೌಕರರು,<br>ಜಿಲ್ಲಾ ಕೈಗಾರಿಕಾ ಕೇಂದ್ರ, ಹಾಸನ. | 50. | ಚನ್ನಪ್ಪ,<br>ಗ್ರೂಪ್ ' ಡಿ ' ನೌಕರರು, ಜಿಲ್ಲಾ ಪಂಚಾಯತ್, ಹಾಸನ,<br>ನಿಯೋಜನೆ ಮೇಲೆ ಸರ್ಕಾರಿ ಪದವಿ ಪೂರ್ವ ಕಾಲೇಜು,<br>ಗಂಡಸಿ, ಅರಸಿಕೆರೆ, ಹಾಸನ ಜಿಲ್ಲೆ. |
| 51. | ಜಿ.ವಸಂತಕುಮಾರ್,<br>ಗ್ರೂಪ್ ' ಡಿ ' ನೌಕರರು,<br>ಕುಶಲಕರ್ಮಿ ತರಬೇತಿ ಸಂಸ್ಥೆ, ಸಾಗರ, ಶಿವಮೊಗ್ಗ ಜಿಲ್ಲೆ. | 52. | ಮುದ್ದಯ್ಯ,<br>ಗ್ರೂಪ್ ಡಿ ನೌಕರರು,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ಹೊಳೆನರಸೀಪುರ, ಹಾಸನ ಜಿಲ್ಲೆ. |
| 53. | ಮಹಮದ್ ಖಾಜಾ ಮೋಯಿನುದ್ದೀನ್,<br>ಗ್ರೂಪ್ ಡಿ ನೌಕರರು,<br>ತಾಲ್ಲೂಕು ಕೈಗಾರಿಕಾ ಕೇಂದ್ರ, ಗುಲ್ಬರ್ಗಾ. | 54. | ಕೆ.ಯು.ಧನಂಜಯ,<br>ಜೇನುಕೃಷಿ ಸಂಘಟಕರು, ಮಡಿಕೇರಿ. |
| 55. | ಪಿ.ಆರ್.ಚಿನ್ನಪ್ಪ,<br>ಜೇನುಕೃಷಿ ಸಂಘಟಕರು,<br>ಜೇನುಕೃಷಿ ಅಭಿವೃದ್ಧಿ ಅಧಿಕಾರಿಗಳ ಕಛೇರಿ, ಮಡಿಕೇರಿ. | 56. | ಪಿ.ಎಂ.ತಾರಾಮಣಿ,<br>ಸಹ ಶಿಕ್ಷಕಿ, ಭಾಗಮಂಡಲ ತರಬೇತಿ ಕೇಂದ್ರ, ಮಡಿಕೇರಿ ಜಿಲ್ಲೆ. |
| 57. | ಜಿ.ಎ.ವಾಸುದೇವ,<br>ಜೇನುಕೃಷಿ ಪ್ರದರ್ಶಕರು, ಮಡಿಕೇರಿ. | 58. | ಬಿ.ಕೆ.ಭೀಮಯ್ಯ,<br>ಜೇನುಕೃಷಿ ಪ್ರದರ್ಶಕರು, ಮಡಿಕೇರಿ. |
| 59. | ಎಂ.ಎಂ.ಚಂದ್ರಶೇಖರ್,<br>ಜೇನುಕೃಷಿ ಪ್ರದರ್ಶಕರು, ಮಡಿಕೇರಿ. | 60. | ಟಿ.ಪಿ.ಉತ್ತಪ್ಪ,<br>ಜೇನುಕೃಷಿ ಪ್ರದರ್ಶಕರು, ಮಡಿಕೇರಿ. |
| 61. | ಕೆ.ಡಿ.ಸೋಮಯ್ಯ,<br>ಜೇನುಕೃಷಿ ಪ್ರದರ್ಶಕರು, ಮಡಿಕೇರಿ. | 62. | ಸಿ.ಎಸ್.ಚಂದ್ರಶೇಖರಯ್ಯ,<br>ಜೇನುಕೃಷಿ ಪ್ರದರ್ಶಕರು, ಬಳ್ಳಾರಿ. |
| 63. | ಎ.ಚಿದಾನಂದ ಗೌಡ,<br>ಜೇನುಕೃಷಿ ಪ್ರದರ್ಶಕರು, ಮಡಿಕೇರಿ. | 64. | ಹೆಚ್.ವೈ.ರಾಮು,<br>ಜೇನುಕೃಷಿ ಪ್ರದರ್ಶಕರು, ಮಡಿಕೇರಿ. |
| 65. | ಎಂ.ಪಿ.ನಾಣಯ್ಯ,<br>ಜೇನುಕೃಷಿ ಪ್ರದರ್ಶಕರು, ಮಡಿಕೇರಿ. | 66. | ಬಿ.ಎಸ್.ಮಾದಪ್ಪ,<br>ಜೇನುಕೃಷಿ ಪ್ರದರ್ಶಕರು, ಮಡಿಕೇರಿ. |

| ಕ್ರಮ ಸಂಖ್ಯೆ | ಅಧಿಕಾರಿ/ನೌಕರರ ಹೆಸರು, ಹುದ್ದೆ, ಕಛೇರಿ ಹಾಗೂ ಸ್ಥಳ ಶ್ರೀಮತಿ/ಶ್ರೀ | ಕ್ರಮ ಸಂಖ್ಯೆ | ಅಧಿಕಾರಿ/ನೌಕರರ ಹೆಸರು, ಹುದ್ದೆ, ಕಛೇರಿ ಹಾಗೂ ಸ್ಥಳ ಶ್ರೀಮತಿ/ಶ್ರೀ |
|---|---|---|---|
| 67. | ಸುರೇಶ್, ಜೇನುಕೃಷಿ ಪ್ರದರ್ಶಕರು, ಮಡಿಕೇರಿ. | 68. | ಕೆ.ಎಸ್.ಶಿವಪ್ಪ, ಜೇನುಕೃಷಿ ಪ್ರದರ್ಶಕರು, ಮಡಿಕೇರಿ. |
| 69. | ಸುಂದರಸ್ವಾಮಿ, ಜೇನುಕೃಷಿ ಪ್ರದರ್ಶಕರು, ಮೈಸೂರು. | 70. | ಮಹಾಬಲ ಭಟ್ಟ, ಜೇನುಕೃಷಿ ಸಹಾಯಕರು, ಜಿಲ್ಲಾ ಪಂಚಾಯತ್, ದಕ್ಷಿಣ ಕನ್ನಡ. |
| 71. | ಕೆ.ಕೆ.ಬೆಳ್ಳಿ, ಜೇನುಕೃಷಿ ಸಹಾಯಕರು, ಮಡಿಕೇರಿ. | 72. | ಎಂ.ಸಿ.ಅಚ್ಚಪ್ಪ, ಜೇನುಕೃಷಿ ಸಹಾಯಕರು, ಮಡಿಕೇರಿ. |
| 73. | ಮೇದಪ್ಪಗೌಡ, ಜೇನುಕೃಷಿ ಸಹಾಯಕರು, ದಕ್ಷಿಣ ಕನ್ನಡ. | | |

**ಪದ್ಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

ಪಿ.ಆರ್.173

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** ಮೀನುಗಾರಿಕೆ ಇಲಾಖೆಯ/ಜಿಲ್ಲಾ ಪಂಚಾಯತ್‌ಗಳ/ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯಲ್ಲಿನ ಸರ್ಕಾರಿ ಸ್ವಾಮ್ಯದ ಜಲಸಂಪನ್ಮೂಲಗಳಾದ ಕೆರೆಗಳ, ನದಿಗಳ, ತೊರೆಗಳ ಮತ್ತು ಜಲಾಶಯಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಗೆ ಸಂಬಂಧಪಟ್ಟಂತೆ ರೂಪಿಸಿರುವ ನಿಯಮಾವಳಿಗಳಿಗೆ ತಿದ್ದುಪಡಿ ಕುರಿತಂತೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಏಹೆಚ್‌ಎಫ್/52/ಎಸ್‌ಎಫ್‌ಎಂ/95 ದಿನಾಂಕ:09-06-1997
2. ತಿದ್ದುಪಡಿ ಆದೇಶ ಸಂಖ್ಯೆ:ಪಸಂಮೀ/220/ಮೀಇಇ/97 ದಿನಾಂಕ:13-10-1998.
3. ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅಪೀಲ್ ಸಂಖ್ಯೆ: 8197/99 C/W W.A.No.8104/99 & 711-712/2000 C/W, W.P.No.21686/2000 C/W. 21708/2000 & 21554/ 2000ರಲ್ಲಿ ದಿನಾಂಕ:29-11-2001ರಂದು ನೀಡಿರುವ ತೀರ್ಪು.
4. ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಪಿಟಿಷನ್ ಸಂಖ್ಯೆ:47233/ 2001ರಲ್ಲಿ ದಿನಾಂಕ:17-01-2002ರಂದು ನೀಡಿರುವ ತೀರ್ಪು.
5. ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಪಿಟಿಷನ್ ಸಂಖ್ಯೆ:39262 & 39409-10/2002ರಲ್ಲಿ ದಿನಾಂಕ:05-03-2003 ರಂದು ನೀಡಿರುವ ತೀರ್ಪು.
6. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಆದೇಶ ಸಂಖ್ಯೆ: ಗ್ರಾಅಮ/165 /ಜಿಪಾಸ/2002 ದಿನಾಂಕ:01-03-2004.
7. ಮೀನುಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ಹಗುಪ/2/54/2004-05 ದಿನಾಂಕ:07-09-2004.
8. ಮೀನುಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ಹಗುಪ(1)/135/04-05 ದಿನಾಂಕ:30-09-2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮೀನುಗಾರಿಕೆ ಇಲಾಖೆಯ ದೊಡ್ಡ ಕೆರೆ, ನದಿಗಳು, ಸಣ್ಣ ಕೆರೆಗಳು, ಜಲಾಶಯ ಮತ್ತು ತೊರೆಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಗೆ ಸಂಬಂಧಿಸಿದಂತೆ ನಿಯಮಾವಳಿಗಳನ್ನೊಳಗೊಂಡ ಒಂದು ಮೀನುಗಾರಿಕೆ ನೀತಿಯನ್ನು ರೂಪಿಸಿ ಮಂಜೂರಾತಿ ನೀಡಲಾಗಿದೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ತಿದ್ದುಪಡಿ ಆದೇಶದಲ್ಲಿ ಮೀನುಗಾರಿಕೆ ಫಸಲಿ ವರ್ಷವನ್ನು ಜುಲೈ 1 ರಿಂದ ಮುಂದಿನ ವರ್ಷದ ಜೂನ್ 30ರ ವರೆಗೆ ನಿಗದಿಪಡಿಸಿ ತಿದ್ದುಪಡಿ ಆದೇಶವನ್ನು ಹೊರಡಿಸಲಾಗಿದೆ.

ಮೇಲೆ ಕ್ರಮಾಂಕ (3), (4) ಮತ್ತು (5)ರಲ್ಲಿ ಓದಲಾದ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪುಗಳಲ್ಲಿ ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂಪಿಸಲಾಗಿರುವ ಮೀನುಗಾರಿಕೆ ನಿಯಮಾವಳಿಗಳಿಗೆ ಕೆಲವು ತಿದ್ದುಪಡಿಗಳನ್ನು/ ಮಾರ್ಪಾಡುಗಳನ್ನು ಮಾಡಲು ಸೂಚನೆಗಳನ್ನು ನೀಡಲಾಗಿದೆ.

ಮೇಲೆ ಕ್ರಮಾಂಕ (6)ರಲ್ಲಿ ಓದಲಾದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಆದೇಶದಲ್ಲಿ 40.00 ಹೆಕ್ಟೇರ್ ಅಚ್ಚುಕಟ್ಟು ವಿಸ್ತೀರ್ಣಕ್ಕಿಂತ ಕಡಿಮೆಯಿರುವ ಎಲ್ಲಾ ಕೆರೆಗಳನ್ನು ಆಯಾ ಗ್ರಾಮ ಪಂಚಾಯಿತಿಗಳಿಗೆ ವರ್ಗಾಯಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮಾಂಕ (7)ರಲ್ಲಿ ಓದಲಾದ ಮೀನುಗಾರಿಕೆ ನಿರ್ದೇಶಕರ ಪತ್ರದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ಸಂಬಂಧಿತ ತೀರ್ಪುಗಳಲ್ಲಿ ನೀಡಿರುವ ಸೂಚನೆಗಳ ಮೇರೆಗೆ ಪ್ರಸ್ತುತ ಜಾರಿಯಲ್ಲಿರುವ ಮೀನುಗಾರಿಕೆ ನಿಯಮಾವಳಿಗಳಿಗೆ ಕೆಲವು ತಿದ್ದುಪಡಿಗಳನ್ನು ಸೂಚಿಸಿ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.

ಮೇಲೆ ಕ್ರಮಾಂಕ (8)ರಲ್ಲಿ ಓದಲಾದ ಮೀನುಗಾರಿಕೆ ನಿರ್ದೇಶಕರ ಪತ್ರದಲ್ಲಿ ಸದರಿ ಜಲಸಂಪನ್ಮೂಲಗಳಲ್ಲಿನ ಮೀನು ಪಾಶುವಾರು ಹಕ್ಕಿನ ವಿಲೇವಾರಿಗೆ ಸಂಬಂಧಿಸಿದಂತೆ ಗುತ್ತಿಗೆ ಮೊತ್ತವನ್ನು ನಿಗದಿಪಡಿಸುವ ಸಂಬಂಧ ತಿದ್ದುಪಡಿಯನ್ನು ಕೋರಲಾಗಿದೆ.

ಮೇಲೆ ವಿವರಿಸಿರುವ ಎಲ್ಲಾ ಅಂಶಗಳನ್ನು ಗಮನಿಸಿ ಪ್ರಸ್ತುತ ಜಾರಿಯಲ್ಲಿರುವ ಮೀನುಗಾರಿಕೆ ನೀತಿಗೆ (ಮೀನು ಪಾಶುವಾರು ಹಕ್ಕಿನ ವಿಲೇವಾರಿಗೆ ಸಂಬಂಧಪಟ್ಟ ನಿಯಮಾವಳಿಗಳಿಗೆ) ಕೆಲವು ತಿದ್ದುಪಡಿಗಳನ್ನು ತರಲು ತೀರ್ಮಾನಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಲು ನಿರ್ಣಯಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 166 ಮೀಇಇ 2004, ಬೆಂಗಳೂರು, ದಿನಾಂಕ: 15ನೇ ಜನವರಿ, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮೀನುಗಾರಿಕೆ ಇಲಾಖೆಯ/ಜಿಲ್ಲಾ ಪಂಚಾಯತ್‌ಗಳ/ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯಲ್ಲಿನ ಸರ್ಕಾರಿ ಸ್ವಾಮ್ಯದ ಜಲಸಂಪನ್ಮೂಲ ಗಳಾದ ಕೆರೆಗಳ, ನದಿಗಳ, ತೊರೆಗಳ ಮತ್ತು ಜಲಾಶಯಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಗೆ ಸಂಬಂಧಪಟ್ಟಂತೆ ಸರ್ಕಾರಿ ಆದೇಶ ಸಂಖ್ಯೆ:ಎಹೆಚ್‌ಎಫ್/52/ಎಸ್‌ಎಫ್‌ಎಂ/95 ದಿನಾಂಕ: 09-06-1997 ಮತ್ತು ಸದರಿ ಆದೇಶದ ಅನುಬಂಧ-1 ಮತ್ತು ಅನುಬಂಧ-2ರಲ್ಲಿ ರೂಪಿಸಲಾಗಿರುವ ನಿಯಮಾವಳಿಗಳಿಗೆ/ಷರತ್ತು ಮತ್ತು ನಿಬಂಧನೆಗಳಿಗೆ (ಸಂಬಂಧಿತ ಕಂಡಿಕೆಗಳಿಗೆ) ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕೆಳಕಂಡಂತೆ ತಿದ್ದುಪಡಿ ಮಾಡಿ ಆದೇಶಿಸಿದೆ.

ಸದರಿ ತಿದ್ದುಪಡಿ ಮಾಡಲಾದ ಕಂಡಿಕೆಗಳನ್ನು ಹಾಲಿ ಸರ್ಕಾರಿ ಆದೇಶ ಸಂಖ್ಯೆ:

ಎಹೆಚ್‌ಎಫ್/52/ಎಸ್‌ಎಫ್‌ಎಂ/95 ದಿನಾಂಕ:09-06-1997 ಮತ್ತು ಸದರಿ ಆದೇಶದ ಅನುಬಂಧ-1 ಮತ್ತು ಅನುಬಂಧ-2ರಲ್ಲಿನ ಸಂಬಂಧಪಟ್ಟ ಕಂಡಿಕೆಗಳ ಬದಲಿಗೆ ತಿದ್ದಿ ಓದಿಕೊಳ್ಳಲು ಆದೇಶಿಸಿದೆ.

**ಕಂಡಿಕೆ 1:** ರಾಜ್ಯದಲ್ಲಿರುವ ಎಲ್ಲಾ ಸರ್ಕಾರಿ ಸ್ವಾಮ್ಯದ ಕೆರೆಗಳನ್ನು ಅವುಗಳ ಅಚ್ಚುಕಟ್ಟು ವಿಸ್ತೀರ್ಣದ ಆಧಾರದ ಮೇರೆಗೆ ವಿಂಗಡಿಸಿ ಈ ಕೆಳಗಿನಂತೆ ವರ್ಗೀಕರಿಸಲಾಗಿದೆ:

(ಅ) ಎಲ್ಲೆಲ್ಲಿ ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆಯೋ ಅಲ್ಲಲ್ಲಿ ಆಯಾ ಗ್ರಾಮ ಪಂಚಾಯಿತಿಗಳ ವ್ಯಾಪ್ತಿಗೆ ಒಳಪಡಿಸಿರುವ 40 ಹೆಕ್ಟೇರ್ ವರೆಗಿನ ಅಚ್ಚುಕಟ್ಟು ವಿಸ್ತೀರ್ಣವುಳ್ಳ ಕೆರೆಗಳ ಅಭಿವೃದ್ಧಿಗಾಗಿ ಸದರಿ ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗಳು ನೀಡುವ ಎಲ್ಲಾ ಸೌಲಭ್ಯಗಳನ್ನು ಮುಂದುವರೆಸತಕ್ಕದ್ದು.

(ಆ) 40 ಹೆಕ್ಟೇರ್‌ಗಳಿಗಿಂತ ಹೆಚ್ಚಿನ ಅಚ್ಚುಕಟ್ಟುವುಳ್ಳ ಸರ್ಕಾರಿ ಸ್ವಾಮ್ಯದ ಎಲ್ಲಾ ಜಲಸಂಪನ್ಮೂಲಗಳು ಮೀನುಗಾರಿಕೆ ಇಲಾಖೆಯ ವ್ಯಾಪ್ತಿಗೆ ಒಳಪಟ್ಟಿರುತ್ತವೆ.

**ಕಂಡಿಕೆ 2:** ಮೀನುಗಾರಿಕೆ ಇಲಾಖೆಯ ವ್ಯಾಪ್ತಿಗೆ ಬರುವ ಎಲ್ಲಾ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಯನ್ನು ಕೆಳಗೆ ಕಾಣಿಸಿದಂತೆ ಆದ್ಯತೆ ಮೇಲೆ ಗುತ್ತಿಗೆಗೆ ನೀಡತಕ್ಕದ್ದು.

1. ಜಲ ಸಂವರ್ಧನಾ ಯೋಜನಾ ಸಂಘದಡಿ ನೋಂದಾಯಿಸಿದ ಸಂಘ/ಸಂಸ್ಥೆಗಳು.
2. ಕರ್ನಾಟಕ ಸಹಕಾರಿ ಮೀನುಗಾರಿಕೆ ಮಹಾಮಂಡಳಿ (ನಿ), ಮೈಸೂರು.
3. ಕರ್ನಾಟಕ ಸಹಕಾರಿ ಮೀನುಗಾರಿಕೆ ಮಹಾಮಂಡಳಿ (ನಿ), ಮೈಸೂರು ಇದರ ಸದಸ್ಯತ್ವವನ್ನು ಹೊಂದಿರುವ ಮೀನುಗಾರರ ಸಹಕಾರ ಸಂಘಗಳು. (ಈ ಆದ್ಯತೆಗೆ ಸೇರಿದ ಮೀನುಗಾರರ ಸಹಕಾರ ಸಂಘಗಳು ಒಂದೇ ಕೆರೆಗೆ ಪೈಪೋಟಿ ನಡೆಸಿದಲ್ಲಿ ಸದರಿ ಕೆರೆಯ ಗ್ರಾಮದ ವ್ಯಾಪ್ತಿಗೆ ಬರುವ ಸಹಕಾರ ಸಂಘಕ್ಕೆ ಪ್ರಥಮ ಆದ್ಯತೆಯನ್ನು ನೀಡುವುದು. ನಂತರದ ಆದ್ಯತೆಯನ್ನು ಅನುಕ್ರಮವಾಗಿ ಸಂಬಂಧಪಟ್ಟ ಹೋಬಳಿ ಮಟ್ಟದ, ತಾಲ್ಲೂಕು ಮಟ್ಟದ ಮತ್ತು ಜಿಲ್ಲಾ ಮಟ್ಟದ ಕಾರ್ಯವ್ಯಾಪ್ತಿಯನ್ನು ಹೊಂದಿರುವ ಸಹಕಾರ ಸಂಘಗಳಿಗೆ ನೀಡುವುದು).
4. ನೋಂದಾಯಿಸಲ್ಪಟ್ಟ ಮೀನುಗಾರರ ಸಹಕಾರ ಸಂಘಗಳು (ಈ ಆದ್ಯತೆಗೆ ಸೇರಿದ ಮೀನುಗಾರರ ಸಹಕಾರ ಸಂಘಗಳು ಒಂದೇ ಕೆರೆಗೆ ಪೈಪೋಟಿ ನಡೆಸಿದಲ್ಲಿ ಸದರಿ ಕೆರೆಯ ಗ್ರಾಮದ ವ್ಯಾಪ್ತಿಗೆ ಬರುವ ಸಹಕಾರ ಸಂಘಕ್ಕೆ ಪ್ರಥಮ ಆದ್ಯತೆಯನ್ನು ನೀಡುವುದು. ನಂತರದ ಆದ್ಯತೆಯನ್ನು ಅನುಕ್ರಮವಾಗಿ ಸಂಬಂಧಪಟ್ಟ ಹೋಬಳಿ ಮಟ್ಟದ, ತಾಲ್ಲೂಕು ಮಟ್ಟದ ಮತ್ತು ಜಿಲ್ಲಾ ಮಟ್ಟದ ಕಾರ್ಯವ್ಯಾಪ್ತಿಯನ್ನು ಹೊಂದಿರುವ ಸಹಕಾರ ಸಂಘಗಳಿಗೆ ನೀಡುವುದು).
5. ಮೀನುಗಾರಿಕೆ ವಿಷಯದಲ್ಲಿ ಪದವಿ ಹೊಂದಿದ ನಿರುದ್ಯೋಗಿ ಮೀನುಗಾರಿಕೆ ಪದವೀಧರರು.
6. ನೋಂದಾಯಿಸಲ್ಪಟ್ಟ ಸಣ್ಣ ನೀರಾವರಿ ಬಳಕೆದಾರರ ಸಹಕಾರ ಸಂಘಗಳು/ಕೆರೆ ಅಭಿವೃದ್ಧಿ ಸಂಘಗಳು/ಕೆರೆ ಬಳಕೆದಾರರ ಸಂಘಗಳು/ಕೆರೆ ಅಚ್ಚುಕಟ್ಟುದಾರರ ಸಂಘಗಳು/ಕೆರೆ ನಿರ್ವಹಣಾ ಸಂಘಗಳು, ವನ್ಯಜೀವಿ/ಜೀವಿ ವೈವಿಧ್ಯ ಸಂರಕ್ಷಣಾ ಸಂಘಗಳು/ ಈ ಆದ್ಯತೆಯಲ್ಲಿ ಒಂದೇ ಕೆರೆಗೆ ಒಂದಕ್ಕಿಂತ ಹೆಚ್ಚು ಸಂಘಗಳು ಅಥವಾ ಸಂಸ್ಥೆಗಳು ಪೈಪೋಟಿ ನಡೆಸಿದಲ್ಲಿ ಪೈಪೋಟಿ ನಡೆಸಿದ ಅಂತಹ ಸಂಘ ಸಂಸ್ಥೆಗಳಲ್ಲಿ ಮಾತ್ರ ಹರಾಜು ಮಾಡಿ ಗುತ್ತಿಗೆ ನೀಡುವುದು.

ಮೀನು ಪಾಶುವಾರು ಹಕ್ಕಿನ ಗುತ್ತಿಗೆಯನ್ನು ಪಡೆಯಲು ಬಯಸುವ ಮೇಲ್ಕಾಣಿಸಿದ ಸಂಘಗಳು/ ಸಂಸ್ಥೆಗಳು ತಮ್ಮ ಬೈಲಾಗಳಲ್ಲಿ ಮೀನುಗಾರಿಕೆ ಚಟುವಟಿಕೆಯನ್ನು ಮುಖ್ಯ ಚಟುವಟಿಕೆಯನ್ನಾಗಿ ಘೋಷಿಸಿರತಕ್ಕದ್ದು.

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಮತ್ತು ಗಿರಿಜನರ ಹಾಗೂ ಸರ್ಕಾರದ ಯೋಜನೆಗಳ ಹಿತಾಸಕ್ತಿಯನ್ನು ಕಾಪಾಡುವ ದೃಷ್ಟಿಯಲ್ಲಿ ಮೇಲ್ಕಾಣಿಸಿದ ಆದ್ಯತೆಯನ್ನು ಆಯಾ ಸಂದರ್ಭಕ್ಕೆ ಅನುಗುಣವಾಗಿ ಬದಲಾಯಿಸುವ ಹಕ್ಕನ್ನು ಸರ್ಕಾರವು ಹೊಂದಿರುತ್ತದೆ.

ಒಂದೇ ಆದ್ಯತೆಯಲ್ಲಿ ಬರುವ ಸಂಘಗಳ/ವ್ಯಕ್ತಿಗಳ ನಡುವೆ ಪೈಪೋಟಿ ಬಂದಲ್ಲಿ ಹರಾಜು ಮೂಲಕ ವಿಲೇವಾರಿ ಮಾಡುವುದು.

**ಕಂಡಿಕೆ 3**: ಮೀನು ಪಾಶುವಾರು ಹಕ್ಕಿನ ಗುತ್ತಿಗೆಯನ್ನು ಗರಿಷ್ಟ 5 (ಐದು) ವರ್ಷಗಳ ಅವಧಿಗೆ ನೀಡತಕ್ಕದ್ದು. ಪ್ರತಿ ವರ್ಷ ಹಿಂದಿನ ವರ್ಷದ ಗುತ್ತಿಗೆ ಮೊತ್ತಕ್ಕೆ ಶೇಕಡ 10 ರಷ್ಟು ಗುತ್ತಿಗೆ ಮೊತ್ತವನ್ನು ಹೆಚ್ಚಿಸುವ ನಿಬಂಧನೆ ವಿಧಿಸತಕ್ಕದ್ದು. (ಈ ತಿದ್ದುಪಡಿ ಆದೇಶದ ದಿನಾಂಕದಂದು ಈಗಾಗಲೇ 3 ವರ್ಷಗಳ ಅವಧಿಗೆ ಮೀನು ಪಾಶುವಾರು ಹಕ್ಕಿನ ಗುತ್ತಿಗೆಯನ್ನು ಪಡೆದಿರುವ ಎಲ್ಲಾ ಸಂಘಗಳ /ಸಂಸ್ಥೆಗಳ/ವ್ಯಕ್ತಿಗಳ ಗುತ್ತಿಗೆ ಅವಧಿಯನ್ನು 5 (ಐದು) ವರ್ಷಗಳ ಅವಧಿಗೆ ವಿಸ್ತರಿಸತಕ್ಕದ್ದು.)

**ಕಂಡಿಕೆ 4**: ಗುತ್ತಿಗೆಗೆ ನೀಡಲಾದ ಜಲಸಂಪನ್ಮೂಲದ ಒಟ್ಟು ಜಲ ವಿಸ್ತೀರ್ಣವನ್ನು ಗಣನೆಗೆ ತೆಗೆದುಕೊಂಡು ಪ್ರತಿ ಹೆಕ್ಟೇರ್‌ಗೆ ರೂ.150-00ರಂತೆ ಗುತ್ತಿಗೆ ಮೊತ್ತವನ್ನು ನಿಗದಿಪಡಿಸತಕ್ಕದ್ದು. ಈ ರೀತಿ ನಿಗದಿಪಡಿಸಿದ ಮೊತ್ತಕ್ಕೆ ಮುಂದಿನ ವರ್ಷಗಳಲ್ಲಿ ಪ್ರತಿ ವರ್ಷ ಶೇ.10ರಷ್ಟು ಹೆಚ್ಚಿಸಿ ಗುತ್ತಿಗೆ ಮೊತ್ತವನ್ನು ಪಡೆಯತಕ್ಕದ್ದು. ಹೊಸದಾಗಿ ಪ್ರಸ್ತಾವನೆಯನ್ನು ಸಲ್ಲಿಸುವ ಸಮಯದಲ್ಲಿ ಕಳೆದ ವರ್ಷ (ಅಥವಾ ಕೊನೆಯ ವರ್ಷ) ಪಡೆಯಲಾಗಿದ್ದ ಗುತ್ತಿಗೆ ಮೊತ್ತಕ್ಕೆ ಶೇ.10ರಷ್ಟನ್ನು ಹೆಚ್ಚಿಸಿ ಗುತ್ತಿಗೆ ಮೊತ್ತವನ್ನು ನಿಗದಿಗೊಳಿಸಿ ಹೊಸ ಪ್ರಸ್ತಾವನೆಯನ್ನು ಅನುಮೋದನೆಗಾಗಿ ಸಲ್ಲಿಸತಕ್ಕದ್ದು.

**ಕಂಡಿಕೆ 5**: ಎಲ್ಲೆಲ್ಲಿ ಕೆರೆಗಳಲ್ಲಿ ಮೀನುಗಾರಿಕೆ ಅಭಿವೃದ್ಧಿಪಡಿಸುವ ಸಂಬಂಧ ಮೀನು ಪಾಶುವಾರು ಹಕ್ಕಿನ ಗುತ್ತಿಗೆ ಪಡೆಯಲು ಸಂಘ/ಸಂಸ್ಥೆಗಳು ಮುಂದೆ ಬರುವುದಿಲ್ಲವೋ ಅಂತಹ ಕೆರೆಗಳ ಮೀನು ಪಾಶುವಾರು ಹಕ್ಕನ್ನು ಟೆಂಡರ್-ಕಂ-ಹರಾಜು ಮೂಲಕ ಗರಿಷ್ಟ 5 ವರ್ಷಗಳ ಅವಧಿಗೆ ಹೆಚ್ಚಿನ ಪ್ರಚಾರ ನೀಡಿ ವಿಲೇವಾರಿ ಮಾಡತಕ್ಕದ್ದು. ಹಿಂದಿನ ವರ್ಷದ ಟೆಂಡರ್-ಕಂ-ಹರಾಜು ಮೊತ್ತಕ್ಕೆ ಪ್ರತಿ ವರ್ಷ ಶೇ.10ರಷ್ಟನ್ನು ಹೆಚ್ಚಿಸುವ ಷರತ್ತನ್ನು ವಿಧಿಸತಕ್ಕದ್ದು.

**ಕಂಡಿಕೆ 15**: ಮೀನುಗಾರಿಕೆ ಫಸಲಿ ವರ್ಷವು ಜುಲೈ 1 ರಿಂದ ಮುಂದಿನ ವರ್ಷದ ಜೂನ್ 30 ರವರೆಗಿನ ಅವಧಿಯಾಗಿರುತ್ತದೆ. ತಾಲ್ಲೂಕು ಮಟ್ಟದ ಅಧಿಕಾರಿಗಳು ಮೀನುಗಾರಿಕೆ ಅಭಿವೃದ್ಧಿಗೆ ಯೋಗ್ಯವಾದ ಎಲ್ಲಾ ಕೆರೆಗಳ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ಅಥವಾ ಟೆಂಡರ್-ಕಂ-ಹರಾಜು ಮೂಲಕ ವಿಲೇವಾರಿ ಮಾಡಲು ಅಗತ್ಯ ಕ್ರಮ ಕೈಗೊಂಡು ವಿಲೇವಾರಿ ಪ್ರಕ್ರಿಯೆಯನ್ನು ಫಸಲಿ ವರ್ಷದ ಆರಂಭದಿಂದ ಗರಿಷ್ಠ 5 ತಿಂಗಳೊಳಗಾಗಿ ಮುಗಿಸಿ ಅನುಮೋದನೆಗಾಗಿ ಅಥವಾ ದೃಢೀಕರಣಗಾಗಿ ಪ್ರಸ್ತಾವನೆಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸತಕ್ಕದ್ದು. ಪ್ರತಿಯೊಂದು ಕೆರೆಯ ಪೂರ್ಣ ಪ್ರಸ್ತಾವನೆಯನ್ನು ತಾಲ್ಲೂಕು ಮಟ್ಟದ ಅಧಿಕಾರಿಗಳ ಹಂತದ ಪ್ರಕ್ರಿಯೆ ಮುಗಿದ 8 ದಿನಗಳೊಳಗಾಗಿ ಜಿಲ್ಲಾ ಮಟ್ಟದ ಅಧಿಕಾರಿಗಳಿಗೆ ಸಲ್ಲಿಸತಕ್ಕದ್ದು. ಅದೇ ರೀತಿ, ಜಿಲ್ಲಾ ಮಟ್ಟದ ಮತ್ತು ವಲಯ ಮಟ್ಟದ ಅಧಿಕಾರಿಗಳು ಪೂರ್ಣ ಪ್ರಸ್ತಾವನೆಗಳನ್ನು ಅವರಿಗೆ ಸದರಿ ಪ್ರಸ್ತಾವನೆಗಳು ತಲುಪಿದ ಗರಿಷ್ಟ (ತಲಾ ಪ್ರಸ್ತಾವನೆ ತಲುಪಿದ ಗರಿಷ್ಟ 10 ದಿವಸಗಳೊಳಗಾಗಿ) 10 ದಿವಸಗಳೊಳಗಾಗಿ ಸಕ್ಷಮ ಪ್ರಾಧಿಕಾರಕ್ಕೆ ಅನುಮೋದನೆಗಾಗಿ/ದೃಢೀಕರಣಕ್ಕಾಗಿ ಸಲ್ಲಿಸತಕ್ಕದ್ದು.

**ಕಂಡಿಕೆ 16**: ಅನಾವೃಷ್ಟಿಯಿಂದ ಸಾಕಷ್ಟು ನೀರು ಸಂಗ್ರಹವಾಗದಿರುವುದು, ಅತಿವೃಷ್ಠಿಯಿಂದ ಕೆರೆ ಕಟ್ಟೆ ಒಡೆದು ಹೋಗಿ ನೀರು ಸಂಪೂರ್ಣವಾಗಿ ಸೋರಿ ಹೋಗುವುದು, ಕೆರೆಗಳ ದುರಸ್ತಿ ಕೈಗೊಂಡಿರುವುದು, ಮುಂತಾದ ಕಾರಣಗಳಿಂದ ಕೆರೆಗಳ ವಿಲೇವಾರಿ ಮಾಡಲು ಸಾಧ್ಯವಾಗದೇ ಇರುವ ಸಂದರ್ಭಗಳಲ್ಲಿ ವಿಲೇವಾರಿ ವಿನಾಯಿತಿ ಪ್ರಸ್ತಾವನೆಯನ್ನು ಆಯಾ ಮೀನುಗಾರಿಕೆ ಫಸಲಿ ವರ್ಷದ ಡಿಸೆಂಬರ್ ಮಾಹೆಯ ಅಂತ್ಯದೊಳಗಾಗಿ ಮೇಲಾಧಿಕಾರಿಗಳ ಮುಖಾಂತರ ಮೀನುಗಾರಿಕೆ ನಿರ್ದೇಶಕರಿಗೆ ಸಲ್ಲಿಸಿ ವಿಲೇವಾರಿ ವಿನಾಯಿತಿ ಆದೇಶವನ್ನು ಪಡೆದುಕೊಳ್ಳತಕ್ಕದ್ದು. ವಿಲೇವಾರಿ ವಿನಾಯಿತಿ ಆದೇಶಗಳನ್ನು ತಪ್ಪದೇ ಜನವರಿ ಅಂತ್ಯದೊಳಗೆ ಮೀನುಗಾರಿಕಾ ನಿರ್ದೇಶಕರು ಹೊರಡಿಸತಕ್ಕದ್ದು. ಪ್ರಸ್ತಾವನೆ ಸಲ್ಲಿಸುವ ಪೂರ್ವಭಾವಿಯಾಗಿ ಇಂತಹ ಪ್ರಕರಣಗಳಲ್ಲಿ ತಾಲ್ಲೂಕು ಮಟ್ಟದ ಮತ್ತು ಜಿಲ್ಲಾ ಮಟ್ಟದ ಅಧಿಕಾರಿಗಳು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ಥಳ ಪರಿಶೀಲನೆ ಜರುಗಿಸಿ, ಮಹಜರು ಮಾಡಿರತಕ್ಕದ್ದು. ಹಾಗೂ ಈ ಬಗ್ಗೆ ಮೀನುಗಾರಿಕೆ ನಿರ್ದೇಶಕರು ಹೊರಡಿಸಿರುವ/ಹೊರಡಿಸುವ ಮಾರ್ಗಸೂಚಿಗಳನ್ನು ಪಾಲಿಸಿರತಕ್ಕದ್ದು. ಇಲ್ಲದಿದ್ದಲ್ಲಿ, ಕೆರೆಗಳ ಮೀನು ಪಾಶುವಾರು ಹಕ್ಕಿನ ವಿಲೇವಾರಿಯಾಗದಿರುವುದರಿಂದ ಉಂಟಾಗುವ ಆರ್ಥಿಕ ನಷ್ಟಕ್ಕೆ ಸಂಬಂಧಪಟ್ಟ ತಾಲ್ಲೂಕು ಮಟ್ಟದ ಮತ್ತು ಜಿಲ್ಲಾ ಮಟ್ಟದ ಅಧಿಕಾರಿಗಳನ್ನು ಜಂಟಿ ಹೊಣೆಗಾರರನ್ನಾಗಿ ಮಾಡಿ ಶಿಸ್ತು ಕ್ರಮಕ್ಕೆ ಒಳಪಡಿಸಲಾಗುವುದು.

**ಗ್ರಾಮ ಪಂಚಾಯಿತಿ ವ್ಯಾಪ್ತಿಯ (40 ಹೆಕ್ಟೇರ್ ಮತ್ತು ಅತಿಗಿಂತ ಕಡಿಮೆ ಅಚ್ಚುಕಟ್ಟು ಪ್ರದೇಶದ) ಕೆರೆಗಳ ಮೀನು ಪಾಶುವಾರು ಹಕ್ಕನ್ನು ವಿಲೇವಾರಿ ಮಾಡುವ ಸಂಬಂಧ ಗ್ರಾಮ ಪಂಚಾಯಿತಿಗಳಿಗೆ ಮಾರ್ಗಸೂಚಿಗಳು.**

1. ಮೀನು ಪಾಶುವಾರು ಹಕ್ಕಿನ ವಿಲೇವಾರಿಗಾಗಿ ಮೀನುಗಾರಿಕೆ ಫಸಲಿ ವರ್ಷವು ಜುಲೈ 1 ರಿಂದ ಮರು ವರ್ಷದ ಜೂನ್ 30ರವರೆಗೆ ಇರುವುದು.
2. ಮೀನು ಕೃಷಿ ಮಾಡಲು ಗ್ರಾಮ ಪಂಚಾಯಿತಿಗಳು ಮೀನುಗಾರಿಕೆ ಇಲಾಖೆಯಿಂದ ತಾಂತ್ರಿಕ ಸಹಾಯ, ಸಹಕಾರ ಮತ್ತು ಮಾರ್ಗದರ್ಶನ ಪಡೆಯುವುದು.
3. ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಬರುವ ಕೆರೆಗಳನ್ನು ಮೀನುಗಾರಿಕೆಯಲ್ಲಿ ಗ್ರಾಮ ಪಂಚಾಯಿತಿಗಳೇ ಅಭಿವೃದ್ಧಿಪಡಿಸಬಹುದು ಅಥವಾ ಸ್ಥಳೀಯ ಮೀನುಗಾರಿಕೆ ಸಹಕಾರ ಸಂಘಗಳ ಮೂಲಕ ಅಭಿವೃದ್ಧಿಪಡಿಸಬಹುದು. ಇಲ್ಲವಾದಲ್ಲಿ ಬಹಿರಂಗವಾಗಿ ಟೆಂಡರ್-ಕಂ-ಹರಾಜು ಮೂಲಕ ವಿಲೇವಾರಿ ಮಾಡಿ ಅದರಿಂದ ಬಂದ ಆದಾಯವನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಯ ವರ್ಗ-IIರ ಲೆಕ್ಕಕ್ಕೆ ಜಮಾ ಮಾಡಿಕೊಳ್ಳುವುದು. ಕೆರೆಗಳ ಬಿಡ್‌ದಾರರು ಅವರ ಜಿಲ್ಲೆಯಲ್ಲಿರುವ ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗಳಿಂದ ಮೀನುಗಾರಿಕೆಯಲ್ಲಿ ತರಬೇತಿ ಪಡೆದು ಮೀನು ಕೃಷಿ ಬಗ್ಗೆ ತಾಂತ್ರಿಕ ಜ್ಞಾನ ಮತ್ತು ಆಯಾ ಸಂಸ್ಥೆಗಳಿಂದ ದೊರೆಯುವ ಸೌಲಭ್ಯಗಳನ್ನು ಪಡೆಯುವುದು.
4. ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿರುವ ಜಿಲ್ಲೆಗಳಲ್ಲಿ ಆಯಾ ಗ್ರಾಮ ಪಂಚಾಯಿತಿಗಳ ವ್ಯಾಪ್ತಿಗೆ ಬರುವ ಕೆರೆಗಳ ಪೈಕಿ ಪ್ರತಿ ವರ್ಷ ಒಂದು ಕೆರೆಯಲ್ಲಿ ಮೀನು ಕೃಷಿ ಕೈಗೊಳ್ಳಲು ತಲಾ 2 ನಿರುದ್ಯೋಗಿ ಯುವಕ/ ಯುವತಿಯರನ್ನು ಆಯಾ ಗ್ರಾಮ ಪಂಚಾಯಿತಿಗಳು ಆಯ್ಕೆ ಮಾಡಿ ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗಳಿಗೆ ತರಬೇತಿಗೆ ಕಳುಹಿಸಬಹುದಾಗಿದೆ. ತರಬೇತಿ ನಂತರ ಆಯ್ಕೆ ಮಾಡಿದ ಕೆರೆಗಳ ಗುತ್ತಿಗೆಯನ್ನು ತರಬೇತಿ ಪಡೆದವರಿಗೆ ಆದ್ಯತೆ ಮೇಲೆ ನೀಡುವುದು. ಕೆರೆಗಳ ಗುತ್ತಿಗೆ ಮೊತ್ತವನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಗಳು ಕೆರೆಗಳ ಜಲ ವಿಸ್ತೀರ್ಣದ ಆಧಾರದ ಮೇಲೆ ಈಗಾಗಲೇ ಸಂಬಂಧಪಟ್ಟ ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗಳು ವಸೂಲಿ ಮಾಡುವಂತೆ ದರ ನಿಗದಿಗೊಳಿಸಿ ವಸೂಲಿ ಮಾಡಿ ಗ್ರಾಮ ಪಂಚಾಯಿತಿ ಲೆಕ್ಕಕ್ಕೆ ಜಮಾ ಮಾಡಿಕೊಳ್ಳುವುದು.
5. ವಿಲೇ ಮಾಡಿದ ಮೀನು ಪಾಶುವಾರು ಹಕ್ಕನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಗಳೇ ದೃಢೀಕರಿಸುವುದು.
6. ಗ್ರಾಮ ಪಂಚಾಯಿತಿಗಳು ಮತ್ತು ಬಹಿರಂಗವಾಗಿ ಟೆಂಡರ್-ಕಂ-ಹರಾಜು ಮೂಲಕ ಗುತ್ತಿಗೆ ಪಡೆದವರು ಸ್ಥಳೀಯ ಮೀನುಗಾರಿಕೆ ಅಧಿಕಾರಿಗಳ ಶಿಫಾರಸ್ಸಿನಂತೆ ಮೀನುಗಾರಿಕೆ ಇಲಾಖೆಯಿಂದಲೇ ಅಥವಾ ಮೀನುಗಾರಿಕೆ ಇಲಾಖೆಯಿಂದ ಅಂಗೀಕೃತ ಮೀನುಮರಿ ಉತ್ಪಾದನಾ ಕೇಂದ್ರಗಳಿಂದ ಮೀನು ಮರಿಗಳನ್ನು ಖರೀದಿಸಿ, ಕೆರೆಗಳಲ್ಲಿ ಬಿತ್ತನೆ ಮಾಡುವುದು, ಇಲಾಖೆಯಲ್ಲಿ ಮೀನು ಮರಿಗಳು ಸಿಗದಿದ್ದಲ್ಲಿ ಖಾಸಗಿ ಮೀನುಮರಿ ಉತ್ಪಾದನಾ ಕೇಂದ್ರಗಳಿಂದ ಅಥವಾ ಹೊರರಾಜ್ಯದಿಂದ ಖರೀದಿಸಬಹುದು.
7. ನಿಷೇಧಿತ ತಳಿಯ ಮೀನು ಮರಿಗಳನ್ನು ಮತ್ತು ಸ್ಥಳೀಯ ಮೀನು ಸಂತತಿಯ ನಾಶಕ್ಕೆ ಕಾರಣವಾಗುವ ಮೀನು ಮರಿಗಳನ್ನು ಯಾವುದೇ ಕಾರಣಕ್ಕೂ ಕೆರೆಗಳಿಗೆ ಬಿತ್ತನೆ ಮಾಡಬಾರದು. ನಿಷೇಧಿತ ಮೀನು ತಳಿಗಳು (1) ತಿಲಾಪಿಯ ಜಾತಿಯ

ಮೀನುಗಳು (ಜಿಲೇಬ್) (2) ವಿದೇಶಿ ಕ್ಯಾಟ್‌ಫಿಶ್‌ಗಳಾದ ಆಫ್ರಿಕನ್ ಕ್ಯಾಟ್ ಫಿಶ್ ಮತ್ತು ಪಂಗೇಷಿಯನ್ ಜಾತಿಯ ಮೀನು (3) ಚೈನೀಸ್ ಬೀನ್ ಹೆಡ್ (ಅರೀಸ್ ದತ್ತೀಸ್ ನೊಬಲಿಸ್), ಇತ್ಯಾದಿ.

8. ಕೆರೆಗಳಲ್ಲಿ ಸಿಡಿಮದ್ದು ಮತ್ತು ವಿಷ ಪ್ರಯೋಗ ಮಾಡಿ ಮೀನು ಹಿಡಿಯುವುದನ್ನು ನಿಷೇಧಿಸತಕ್ಕದ್ದು.
9. ಕೆರೆಗಳ ಮೀನು ಪಾಶುವಾರು ಹಕ್ಕನ್ನು ಪಡೆದವರು ಅಥವಾ ಗ್ರಾಮ ಪಂಚಾಯಿತಿಗಳು ಕೆರೆಗಳಿಗೆ ದಾಸ್ತಾನು ಮಾಡಿದ ಮೀನುಮರಿಗಳ ವಿವರ ಮತ್ತು ಮೀನು ಹಿಡುವಳಿ ಮಾಡಿದ ಅಂಕಿ ಅಂಶಗಳನ್ನು ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿಗಳಿಗೆ ಪ್ರತಿ ತಿಂಗಳ ಮೊದಲನೆಯ ವಾರದೊಳಗೆ ಒಪ್ಪಿಸುವುದು. ಈ ವಿವರಗಳನ್ನು ಗ್ರಾಮ ಪಂಚಾಯಿತಿ ಮತ್ತು ಗ್ರಾಮ ಸಭೆಗಳಿಗೂ ಮಾಹಿತಿಗಾಗಿ ಒಪ್ಪಿಸಬೇಕು.
10. ಕೆರೆಗಳ ಮೀನು ಪಾಶುವಾರು ಹಕ್ಕು ವಿಲೇವಾರಿ ಮಾಡಿದ ಬಗ್ಗೆ ಮತ್ತು ಗಳಿಸಿದ ಆದಾಯದ ಬಗ್ಗೆ, ಉದ್ಯೋಗಾವಕಾಶ ವಿವರಗಳನ್ನು ಸಂಬಂಧಪಟ್ಟ ಗ್ರಾಮ ಪಂಚಾಯಿತಿಗಳು ಪ್ರತಿ ತಿಂಗಳು ಮೊದಲನೆಯ ವಾರದೊಳಗೆ ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿಗಳಿಗೆ ತಪ್ಪದೇ ಕಳುಹಿಸುವುದು. ಈ ವಿವರಗಳನ್ನು ಸಹ ಗ್ರಾಮ ಪಂಚಾಯಿತಿ ಮತ್ತು ಗ್ರಾಮ ಸಭೆಗಳಿಗೂ ಸಲ್ಲಿಸಬೇಕು.
11. ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಬರುವ ಎಲ್ಲಾ ಕೆರೆಗಳಲ್ಲಿ ವೈಜ್ಞಾನಿಕವಾಗಿ ಮೀನು ಕೃಷಿ ಕೈಗೊಂಡು ಅಧಿಕ ಮೀನು ಉತ್ಪತ್ತಿ ಮಾಡಿ ಹೆಚ್ಚಿನ ಆದಾಯ ಪಡೆಯಲು ಕಾಲಕಾಲಕ್ಕೆ ತಾಲ್ಲೂಕು ಮಟ್ಟದ ಮೀನುಗಾರಿಕೆ ಇಲಾಖೆಯ ಅಧಿಕಾರಿಗಳು ಸಂಬಂಧಪಟ್ಟ ಗ್ರಾಮ ಪಂಚಾಯಿತಿಗಳಿಗೆ ಭೇಟಿ ನೀಡಿ ಸಲಹೆ ಮತ್ತು ಮಾರ್ಗದರ್ಶನ ನೀಡುವುದು.
12. ಈಗಾಗಲೇ ಮೀನುಗಾರಿಕೆ ಇಲಾಖೆಯಿಂದ : ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗಳಿಂದ : ಜಿಲ್ಲಾ ಪಂಚಾಯಿತಿಗಳಿಂದ ವಿಲೇವಾರಿ ಮಾಡಿರುವ ಕೆರೆಗಳ ಮೀನು ಪಾಶುವಾರು ಹಕ್ಕನ್ನು ಅವುಗಳ ಗುತ್ತಿಗೆ ಅವಧಿ ಪೂರ್ಣ ಮುಗಿಯುವವರೆಗೆ ಗ್ರಾಮ ಪಂಚಾಯಿತಿಗಳು ಅದೇ ಫಲಾನುಭವಿಗಳಿಗೆ ಮುಂದುವರಿಸಬೇಕು.
13. ಸರ್ಕಾರದ ವಿಶೇಷ ಯೋಜನೆಗಳಡಿ (ವಿಶೇಷ ಘಟಕ ಯೋಜನೆಯಡಿ ಮತ್ತು ಗಿರಿಜನ ಉಪ ಯೋಜನೆಯಡಿ) ಗುರುತಿಸಿದ ಫಲಾನುಭವಿಗಳಿಗೆ ಕೆರೆಗಳನ್ನು ಆದ್ಯತೆಯ ಮೇರೆಗೆ ಎರಡು ವರ್ಷಗಳವರೆಗೆ ಗುತ್ತಿಗೆಗೆ ನೀಡುವುದು.
14. ಸ್ಥಳೀಯ ಕೆರೆ ಅಭಿವೃದ್ಧಿ ಸಂಘ : ಕೆರೆ ನಿರ್ವಹಣಾ ಸಂಘ : ಜಲ ಸಂವರ್ಧನೆ ಯೋಜನೆಯಡಿ ನೋಂದಾಯಿಸಿದ ಸಂಘ ಸಂಸ್ಥೆಗಳಿಗೂ ಆದ್ಯತೆಯ ಮೇಲೆ ಕೆರೆಗಳ ಗುತ್ತಿಗೆ ನೀಡುವುದು.
15. ಈ ಸುತ್ತೋಲೆಯಲ್ಲಿ ತಿಳಿಸದೇ ಇರುವ ಗುತ್ತಿಗೆ ಮೊತ್ತ ಮುಂತಾದ ವಿಷಯಗಳ ಬಗ್ಗೆ ಸಂಬಂಧಿಸಿದಂತೆ ಮೀನುಗಾರಿಕೆ ಇಲಾಖೆಯಿಂದ ಹೊರಡಿಸಲಾಗಿರುವ ಆದೇಶಗಳನ್ನು /ವಿಷಯಗಳನ್ನು ಅಳವಡಿಸಿಕೊಳ್ಳಬಹುದಾಗಿದೆ.

ಈ ಆದೇಶದಲ್ಲಿನ ಅಂಶಗಳ ಬಗ್ಗೆ ಸ್ಪಷ್ಟೀಕರಣವನ್ನು ಸರ್ಕಾರದಿಂದ ಪಡೆಯತಕ್ಕದ್ದು. ಸರ್ಕಾರದ ನಿರ್ಣಯವೇ ಅಂತಿಮವಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ. ಕಮಲಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

**ಸರ್ಕಾರಿ ಆದೇಶ ಸಂಖ್ಯೆ:ಪಸಂಮೀ/166/ಮೀಇಇ/2004 ದಿನಾಂಕ:15-01-2005ರ ಅನುಬಂಧ-1**

(ಸರ್ಕಾರಿ ಆದೇಶ ಸಂಖ್ಯೆ:ಎಹೆಚ್‌ಎಫ್/52/ಎಸ್‌ಎಫ್‌ಎಂ/95 ದಿನಾಂಕ:09-06-1997ರ ಅನುಬಂಧ-1ರಲ್ಲಿನ ಷರತ್ತು ಮತ್ತು ನಿಬಂಧನೆಗಳಿಗೆ (ಸಂಬಂಧಿತ ಕಂಡಿಕೆಗಳಿಗೆ) ತಿದ್ದುಪಡಿಗಳು)

**ಕಂಡಿಕೆ 1:** ತಾಲ್ಲೂಕು ಮಟ್ಟದ ಅಧಿಕಾರಿಗಳು ಪ್ರತಿ ಮೀನುಗಾರಿಕೆ ಫಸಲಿ ವರ್ಷದ ಜೂನ್ ತಿಂಗಳ ಪ್ರಾರಂಭದಲ್ಲಿ ತಮ್ಮ ವ್ಯಾಪ್ತಿಗೆ ಬರುವ ಕೆರೆಗಳ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ನೀಡಲು ಲಭ್ಯವಿರುವ ಕೆರೆಗಳ ಪಟ್ಟಿಯನ್ನು ತಯಾರು ಮಾಡಿ ಆದ್ಯತೆಯಲ್ಲಿ ನಮೂದಿಸಿರುವ ಸಂಘ/ಸಂಸ್ಥೆಗಳಿಂದ ಅರ್ಜಿಗಳನ್ನು ಆಹ್ವಾನಿಸಲು ಪ್ರಕಟಣೆಯನ್ನು ಹೊರಡಿಸತಕ್ಕದ್ದು. ಸದರಿ ಪ್ರಕಟಣೆಯಲ್ಲಿ ಅರ್ಜಿದಾರರು ಒದಗಿಸಬೇಕಾದ ದಾಸ್ತಾವೇಜುಗಳು, ಗುತ್ತಿಗೆಯ ಷರತ್ತು ಮತ್ತು ನಿಬಂಧನೆಗಳನ್ನು ನಮೂದಿಸತಕ್ಕದ್ದು. ಪ್ರಕಟಣೆಯ ಪ್ರತಿಗಳನ್ನು ಕೆರೆಯ ವ್ಯಾಪ್ತಿಯ ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ, ತಾಲ್ಲೂಕಿನ ತಹಶೀಲ್ದಾರರ ಕಛೇರಿ ಮತ್ತು ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿ ಕಛೇರಿಯ ಜಾಹೀರಾತು ಫಲಕಗಳಲ್ಲಿ ಪ್ರದರ್ಶಿಸುವ ವ್ಯವಸ್ಥೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು. ಗುತ್ತಿಗೆಯನ್ನು ಕೋರಿ ಬರುವ ಅರ್ಜಿಗಳನ್ನು ಸ್ವೀಕರಿಸಲು ಜುಲೈ 31ರ ಅಂತಿಮ ಗಡುವು ನೀಡತಕ್ಕದ್ದು. ಜುಲೈ 31ರ ನಂತರ ಬರುವ ಅರ್ಜಿಗಳನ್ನು ತಿರಸ್ಕರಿಸತಕ್ಕದ್ದು.

**ಕಂಡಿಕೆ 2:** ಗುತ್ತಿಗೆ ಪಡೆಯಲು ಆದ್ಯತೆಯಿರುವ ಮೀನುಗಾರರ ಸಹಕಾರ ಸಂಘಗಳು ಮತ್ತು ಸಂಘ/ಸಂಸ್ಥೆಗಳು ನೋಂದಾಯಿಸಲ್ಪಟ್ಟ ದಿನಾಂಕದಿಂದ ಒಂದು ವರ್ಷದ ನಂತರ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ಪಡೆಯಲು ಅರ್ಹತೆಯನ್ನು ಹೊಂದಿರುತ್ತವೆ.

**ಕಂಡಿಕೆ 3:** ಗುತ್ತಿಗೆಯನ್ನು ಪಡೆಯಲು ಆದ್ಯತೆಯಲ್ಲಿರುವ ಹೊಸದಾಗಿ ನೋಂದಾಯಿಸಲ್ಪಟ್ಟ ಮೀನುಗಾರರ ಸಹಕಾರ ಸಂಘಗಳು ಮತ್ತು ಸಂಘ/ಸಂಸ್ಥೆಗಳು ನೋಂದಾಯಿಸಲ್ಪಟ್ಟ ದಿನಾಂಕದಿಂದ ಒಂದು ವರ್ಷದ ನಂತರ ಜಲಸಂಪನ್ಮೂಲಗಳ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ಪಡೆಯಲು ಅರ್ಹತೆಯನ್ನು ಹೊಂದಿರುತ್ತವೆ.

**ಕಂಡಿಕೆ 4:** ಕೆರೆಗಳ ಮೀನು ಪಾಶವಾರು ಹಕ್ಕನ್ನು ಗುತ್ತಿಗೆಗೆ ಕೋರಿರುವ ಆಯಾ ಸಂಘ ಸಂಸ್ಥೆಗಳ ಇತ್ತೀಚಿನ ಆಡಿಟ್ ವರದಿ, ಸಂಘದ ಠರಾವು, ಬೈಲಾ ಪ್ರತಿ, ಮೀನುಗಾರಿಕೆ ಚಟುವಟಿಕೆಯನ್ನು ಕೈಗೊಂಡಿದ್ದಲ್ಲಿ ಕೆರೆವಾರು ಮೀನುಮರಿ ಬಿತ್ತನೆಯ ವಿವರಗಳನ್ನು, ಹಿಡುವಳಿಯ ವಿವರಗಳನ್ನು ಮತ್ತು ಗಳಿಸಿದ ಆದಾಯದ ವಿವರಗಳನ್ನು ಪಡೆದು ತುಲನಾತ್ಮಕವಾಗಿ ಪರಿಶೀಲಿಸಿ ಅರ್ಜಿ ಮತ್ತು ಎಲ್ಲಾ ದಾಸ್ತಾವೇಜುಗಳೊಡನೆ ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿಯು ಸ್ಪಷ್ಟವಾದ ವರದಿಯನ್ನು ತಯಾರು ಮಾಡಿ ಪೂರ್ಣ

ಮಾಹಿತಿಯೊಂದಿಗೆ ಪ್ರಸ್ತಾವನೆಯನ್ನು ಮೀನುಗಾರಿಕೆ ಫಸಲಿ ವರ್ಷದ ಆಗಸ್ಟ್ ತಿಂಗಳಿನ ಮೊದಲನೆ ವಾರದಲ್ಲಿ ಮೇಲಾಧಿಕಾರಿಗೆ ಸಲ್ಲಿಸತಕ್ಕದ್ದು. ಪ್ರತಿ ಮೊದಲನೆ ವರ್ಷದ ಗುತ್ತಿಗೆ ಹಣವನ್ನು ಅರ್ಜಿ ಸಲ್ಲಿಸಿದ ಎಲ್ಲಾ ಸಂಘ ಸಂಸ್ಥೆಗಳಿಂದ ಮುಂಗಡವಾಗಿ ನಗದು ಹುಂಡಿ (D.D.) ಮುಖಾಂತರ ಸ್ವೀಕರಿಸಿ ತಾತ್ಕಾಲಿಕ ರಶೀದಿಯನ್ನು ನೀಡತಕ್ಕದ್ದು. ತಾತ್ಕಾಲಿಕ ರಶೀದಿಯ ಮೇಲೆ "ಗುತ್ತಿಗೆಯ ಬಗ್ಗೆ ಮೇಲಾಧಿಕಾರಿಗಳ ಆದೇಶಕ್ಕೆ ಒಳಪಟ್ಟಿದೆ" ಎಂದು ನಮೂದಿಸತಕ್ಕದ್ದು. ಗುತ್ತಿಗೆ ಆದೇಶ ಬಂದ ನಂತರ, ಯಶಸ್ವಿಯಾಗದ ಸಂಘ ಸಂಸ್ಥೆಗಳ ನಗದು ಹುಂಡಿಯನ್ನು ನಿಯಮಾನುಸಾರ ಅವರಿಂದ ಸ್ವೀಕೃತಿ ಪಡೆದು ಹಿಂದಿರುಗಿಸತಕ್ಕದ್ದು.

**ಕಂಡಿಕೆ 5:** ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಗೆ ಪಡೆದ ಯಾವುದೇ ಗುತ್ತಿಗೆದಾರರು ನಿಷೇಧಿತ ಮೀನುಗಳಾದ ಪ್ರಮುಖವಾಗಿ ಆಫ್ರಿಕನ್ ಕ್ಯಾಟ್ ಫಿಶ್ (ಅಣೆ ಮೀನು) ಮತ್ತು ಬಿಗ್ ಹೆಡ್ ಬಿತ್ತನೆ ಮಾಡುವುದು ಅಥವಾ ಅಭಿವೃದ್ಧಿಪಡಿಸುವುದು ಅಥವಾ ಮಾರಾಟ ಮಾಡುವುದು ಕಂಡು ಬಂದಲ್ಲಿ ಯಾವುದೇ ಕಾರಣವನ್ನು ನೀಡದೆ ಅವರಿಗೆ ನೀಡಲಾದ ಗುತ್ತಿಗೆಯನ್ನು ರದ್ದುಪಡಿಸುವ ಮತ್ತು ಆ ಸಾಲಿನ ಗುತ್ತಿಗೆ ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳುವ ಅಧಿಕಾರವನ್ನು ಮೀನುಗಾರಿಕೆ ನಿರ್ದೇಶಕರು ಹೊಂದಿರುತ್ತಾರೆ. ಈ ನಿಷೇಧಿತ ಮೀನುಮರಿಗಳ ಅಭಿವೃದ್ಧಿ, ಪಾಲನೆ ಮತ್ತು ಮಾರಾಟ ಮಾಡುವುದು ಕಂಡು ಬಂದಲ್ಲಿ ಸಂಬಂಧಪಟ್ಟ ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿಯನ್ನು ಜವಾಬ್ದಾರರನ್ನಾಗಿ ಮಾಡಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗುವುದು.

**ಕಂಡಿಕೆ 6:** ಗುತ್ತಿಗೆದಾರರು ಎರಡನೇ ವರ್ಷದ ಗುತ್ತಿಗೆಯ ಪೂರ್ಣ ಮೊತ್ತವನ್ನು ಮೀನುಗಾರಿಕೆ ಫಸಲಿ ವರ್ಷದ ಪ್ರಾರಂಭದಲ್ಲಿ ಅಂದರೆ ಜುಲೈ 31ರೊಳಗಾಗಿ ಪಾವತಿ ಮಾಡತಕ್ಕದ್ದು. ಒಂದು ವೇಳೆ ಗುತ್ತಿಗೆ ಮೊತ್ತವನ್ನು ನಿಗದಿತ ವೇಳೆಯೊಳಗಾಗಿ ಪಾವತಿಸದಿದ್ದಲ್ಲಿ, ಗುತ್ತಿಗೆ ಆದೇಶವನ್ನು ರದ್ದುಪಡಿಸುವ ಮತ್ತು ಮರು ವಿಲೇಗೊಳಿಸುವ ಅಧಿಕಾರವನ್ನು ಮೀನುಗಾರಿಕೆ ನಿರ್ದೇಶಕರು ಹೊಂದಿರುತ್ತಾರೆ. ಗುತ್ತಿಗೆದಾರರು ಇಲಾಖಾ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ಆದೇಶವನ್ನು ರದ್ದುಪಡಿಸುವ ಅಧಿಕಾರವನ್ನು ಮೀನುಗಾರಿಕೆ ನಿರ್ದೇಶಕರು ಹೊಂದಿರುತ್ತಾರೆ.

**ಡಿ. ಕಮಲಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

**ಸರ್ಕಾರಿ ಆದೇಶ ಸಂಖ್ಯೆ:ಪಸಂಮೀ/166/ಮೀಇಇ/2004 ದಿನಾಂಕ:15-01-2005ರ ಅನುಬಂಧ-2**

(ಸರ್ಕಾರಿ ಆದೇಶ ಸಂಖ್ಯೆ:ಎಹೆಚ್‌ಎಫ್/52/ಎಸ್‌ಎಫ್‌ಎಂ/95 ದಿನಾಂಕ:09-06-1997ರ ಅನುಬಂಧ-1ರಲ್ಲಿನ ಷರತ್ತು ಮತ್ತು ನಿಬಂಧನೆಗಳಿಗೆ (ಸಂಬಂಧಿತ ಕಂಡಿಕೆಗಳಿಗೆ) ತಿದ್ದುಪಡಿಗಳು)

**ಕಂಡಿಕೆ 1:** ಎಲ್ಲೆಲ್ಲಿ ಕೆರೆಗಳ ಮೀನು ಪಾಶುವಾರು ಹಕ್ಕನ್ನು ಗುತ್ತಿಗೆಯ ಮೇಲೆ ಪಡೆಯಲು ಸಂಘ ಸಂಸ್ಥೆಗಳು ಮುಂದೆ ಬರುವುದಿಲ್ಲವೋ, ಅಂತಹ ಕೆರೆಗಳ ವಿಲೇವಾರಿಯನ್ನು ಟೆಂಡರ್-ಕಂ-ಹರಾಜು ಮೂಲಕ ವಿಲೇವಾರಿ ಮಾಡಲು ಸಂಬಂಧಪಟ್ಟ ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿಯು ಮೀನುಗಾರಿಕೆ ಫಸಲಿ ವರ್ಷದ ಆಗಸ್ಟ್ 1 ರಿಂದ ಪ್ರಾರಂಭಿಸತಕ್ಕದ್ದು. ಮೀನು ಪಾಶುವಾರು ಹಕ್ಕನ್ನು ವಿಲೇವಾರಿ ಮಾಡಲು ಉದ್ದೇಶಿಸಲಾದ ಜಲಸಂಪನ್ಮೂಲಗಳ ಟೆಂಡರ್/ಹರಾಜು ಪ್ರಕಟಣೆಗಳನ್ನು ಸ್ಥಳೀಯ ದಿನಪತ್ರಿಕೆಗಳಲ್ಲಿ ಪ್ರಕಟಿಸಿ ಪ್ರಕಟಣೆಯ ಕರ ಪತ್ರಗಳನ್ನು ಕೆರೆಯ ವ್ಯಾಪ್ತಿಯ ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿಗಳಿಗೆ ತಲುಪಿಸಿ ಸ್ವೀಕೃತಿಯನ್ನು ಪಡೆದುಕೊಳ್ಳತಕ್ಕದ್ದು.

**ಕಂಡಿಕೆ 3:** ಟೆಂಡರ್/ಹರಾಜಿನಲ್ಲಿ ಭಾಗವಹಿಸುವವರು ಮೀನುಗಾರಿಕೆ ಇಲಾಖೆಯು ನಿಗದಿ ಪಡಿಸಿದ ಮೊತ್ತವನ್ನು ಠೇವಣಿಯಾಗಿ ಇಡತಕ್ಕದ್ದು. ಈ ಠೇವಣಿ ಮೊತ್ತವನ್ನು ಕೆರೆಯ ಜಲ ವಿಸ್ತೀರ್ಣದ ಶೇ.50ರಷ್ಟು ಗಣನೆಗೆ ತೆಗೆದುಕೊಂಡು ಪ್ರತಿ ಹೆಕ್ಟೇರ್ ರೂ.100-00ರಂತೆ ನಿಗದಿ ಪಡಿಸತಕ್ಕದ್ದು.

**ಕಂಡಿಕೆ 4:** ಟೆಂಡರ್-ಕಂ-ಹರಾಜು ಪ್ರಕಟಣೆಯನ್ನು ಸ್ಥಳೀಯ ದಿನಪತ್ರಿಕೆಗಳಲ್ಲಿ ಪ್ರಕಟಿಸಿ 15 ದಿವಸಗಳ ಕಾಲಾವಕಾಶ ನೀಡಿ ಟೆಂಡರ್-ಕಂ-ಹರಾಜನ್ನು ನಡೆಸತಕ್ಕದ್ದು. ನೀರು ತುಂಬಿದ ಜಲಸಂಪನ್ಮೂಲಗಳನ್ನು ಸರ್ವೇಕ್ಷಣೆ ನಡೆಸಿ ಅವುಗಳ ವಿಲೇವಾರಿಯನ್ನು ಮೂರು ಸುತ್ತಿನಲ್ಲಿ ನಡೆಸತಕ್ಕದ್ದು. ಪೂರ್ಣವಾಗಿ ತುಂಬಿದ ಕೆರೆಗಳನ್ನು ಮೊದಲನೆ ಸುತ್ತಿನಲ್ಲಿ ಅಂದರೆ ಆಗಸ್ಟ್ ತಿಂಗಳಿನಲ್ಲಿ, ಎರಡನೆ ಸುತ್ತನ್ನು ಸೆಪ್ಟೆಂಬರ್-ಅಕ್ಟೋಬರ್ ತಿಂಗಳಿನಲ್ಲಿ ಮತ್ತು ಮೂರನೆ ಹಾಗೂ ಅಂತಿಮ ಸುತ್ತನ್ನು ನವೆಂಬರ್ ತಿಂಗಳಿನಲ್ಲಿ ನಡೆಸತಕ್ಕದ್ದು. ಮೂರನೆ ಸುತ್ತಿನ ನಂತರ ವಿಲೇವಾರಿಯಾಗದ ಕೆರೆಗಳ ಪಟ್ಟಿಯನ್ನು ತಯಾರು ಮಾಡಿ ವಿಲೇವಾರಿಯಿಂದ ವಿನಾಯಿತಿ ಆದೇಶವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆಯತಕ್ಕದ್ದು. ಎಲ್ಲಾ ಜಲಸಂಪನ್ಮೂಲಗಳ ವಿಲೇವಾರಿ ಪ್ರಕ್ರಿಯೆಯನ್ನು ಕಡ್ಡಾಯವಾಗಿ ಮೀನುಗಾರಿಕೆ ಫಸಲಿ ವರ್ಷ ಪ್ರಾರಂಭವಾದ 5 ತಿಂಗಳುಗಳೊಳಗಾಗಿ ಮುಗಿಸತಕ್ಕದ್ದು.

**ಕಂಡಿಕೆ 6:** ಟೆಂಡರ್-ಕಂ-ಹರಾಜಿನಿಂದ ಬಂದ ಬಿಡ್ ಮೊತ್ತವು ಹಿಂದಿನ ವರ್ಷದ ಆದಾಯದ ಶೇ.50ಕ್ಕಿಂತ ಕಡಿಮೆಯಿದ್ದಲ್ಲಿ ಅಂತಹ ಟೆಂಡರ್-ಕಂ-ಹರಾಜು ಪ್ರಕ್ರಿಯೆಯನ್ನು ತಾಲ್ಲೂಕು ಮಟ್ಟದ ಅಧಿಕಾರಿಯೆ ರದ್ದುಗೊಳಿಸಿ ಮರು ವಿಲೇವಾರಿಗೆ ಕ್ರಮಕೈಗೊಳ್ಳತಕ್ಕದ್ದು.

**ಕಂಡಿಕೆ 10:** ಎರಡನೆ ವರ್ಷ ಮತ್ತು ತದನಂತರದ ವಾರ್ಷಿಕ ಟೆಂಡರ್/ಬಿಡ್ ಮೊತ್ತವನ್ನು ಪ್ರತಿ ವರ್ಷದ ಜುಲೈ 31ರೊಳಗಾಗಿ ಪಾವತಿ ಮಾಡತಕ್ಕದ್ದು. ಒಂದು ವೇಳೆ ಪಾವತಿಸದಿದ್ದಲ್ಲಿ ಹರಾಜು ದೃಢೀಕರಣ ಆದೇಶವನ್ನು ರದ್ದುಪಡಿಸುವ ಮತ್ತು ಮರು ವಿಲೇವಾರಿಗೊಳಿಸುವ ಅಧಿಕಾರವನ್ನು ಹರಾಜು ದೃಢೀಕರಣ ಆದೇಶವನ್ನು ನೀಡಿದ ಅಧಿಕಾರಿಯು ಹೊಂದಿರುತ್ತಾರೆ. ಟೆಂಡರ್-ಕಂ-ಹರಾಜು ಮುಖಾಂತರ ಗುತ್ತಿಗೆಯನ್ನು ಪಡೆದ ಬಿಡ್‌ದಾರರು ಇಲಾಖಾ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದ ಪಕ್ಷದಲ್ಲಿ ಅವರ ಗುತ್ತಿಗೆ ಆದೇಶವನ್ನು ರದ್ದುಪಡಿಸುವ ಅಧಿಕಾರವನ್ನು ಮೀನುಗಾರಿಕೆ ನಿರ್ದೇಶಕರು ಹೊಂದಿರುತ್ತಾರೆ.

**ಕಂಡಿಕೆ16:** ಜಲಸಂಪನ್ಮೂಲದ ಮೀನು ಪಾಶುವಾರು ಹಕ್ಕನ್ನು ಟೆಂಡರ್-ಕಂ-ಹರಾಜು ಮುಖಾಂತರ ಗುತ್ತಿಗೆಗೆ ಪಡೆದ ಯಾವುದೇ ಬಿಡ್‌ದಾರರು ನಿಷೇಧಿತ ಮೀನುಗಳಾದ, ಪ್ರಮುಖವಾಗಿ ಆಫ್ರಿಕನ್ ಕ್ಯಾಟ್ ಫಿಶ್ (ಅಣೆ ಮೀನು) ಮತ್ತು ಬಿಗ್ ಹೆಡ್ ಬಿತ್ತನೆ ಮಾಡುವುದು ಅಥವಾ ಅಭಿವೃದ್ಧಿಪಡಿಸುವುದು ಅಥವಾ ಮಾರಾಟ ಮಾಡುವುದು ಕಂಡು ಬಂದಲ್ಲಿ ಯಾವುದೇ ಕಾರಣವನ್ನು

ನೀಡದೆ ಅವರಿಗೆ ನೀಡಲಾಗಿದ್ದ ಗುತ್ತಿಗೆಯನ್ನು ರದ್ದುಪಡಿಸುವ ಮತ್ತು ಆ ಸಾಲಿನ ಗುತ್ತಿಗೆ ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳುವ ಅಧಿಕಾರವನ್ನು ಮೀನುಗಾರಿಕೆ ನಿರ್ದೇಶಕರು ಹೊಂದಿರುತ್ತಾರೆ. ಈ ನಿಷೇಧಿತ ಮೀನುಮರಿಗಳ ಅಭಿವೃದ್ಧಿ, ಪಾಲನೆ ಮತ್ತು ಮಾರಾಟ ಮಾಡುವುದು ಕಂಡು ಬಂದಲ್ಲಿ ಸಂಬಂಧಪಟ್ಟ ತಾಲ್ಲೂಕು ಮಟ್ಟದ ಮೀನುಗಾರಿಕೆ ಅಧಿಕಾರಿಯನ್ನು ಜವಾಬ್ದಾರರನ್ನಾಗಿ ಮಾಡಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗುವುದು.

**ಡಿ. ಕಮಲಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್.175 ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಿಆಸುಇ 45 ಆಸೇಇ 2005, ಬೆಂಗಳೂರು, ದಿನಾಂಕ: 27ನೇ ಜನವರಿ, 2005**

ಅಧಿಸೂಚನೆ ಸಂಖ್ಯೆ: ಸಿಆಸುಇ 256 ಆಸೇಇ 2004, ದಿನಾಂಕ: 20.07.2004 ರಲ್ಲಿ ಕಲಂ 3ರಲ್ಲಿ "ನಿಯಮ 114ರ ಪ್ರಕಾರ" ಎಂದಿರುವುದನ್ನು "ನಿಯಮ 83ರ ಪ್ರಕಾರ" ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಪಿ.ಆರ್.178 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಸ್.ಆರ್. ಕಡಿವಾಲ್, ಶಿರಸ್ತೇದಾರ್, ತಾಲ್ಲೂಕು ಕಛೇರಿ, ಕಲಘಟಗಿ ಇವರು ನಿಯಮ 18ರಡಿಯಲ್ಲಿ ಸಲ್ಲಿಸಿದ ಮೇಲ್ಮನವಿ ಬಗ್ಗೆ.

**ಓದಲಾಗಿದೆ :**
1. ಬಾಗಲಕೋಟೆ ಜಿಲ್ಲಾಧಿಕಾರಿಗಳವರ ಆದೇಶ ಸಂಖ್ಯೆ: ಕ್ರಮಾಂಕ ಆರ್‌ಬಿ/ ಡಿಪಿಇ/ ಸಿಆರ್ 6/ 2002-04, ದಿನಾಂಕ: 28.07.2003.
2. ಶ್ರೀ ಎಸ್.ಆರ್. ಕಡಿವಾಲ್, ಶಿರಸ್ತೇದಾರ್ ಇವರು ಸಿಸಿಎ ನಿಯಮಾವಳಿ ನಿಯಮ 18ರಡಿಯಲ್ಲಿ ದಿನಾಂಕ: 16.10.2003ರಂದು ಸರ್ಕಾರಕ್ಕೆ ಸಲ್ಲಿಸಿದ ಮೇಲ್ಮನವಿ.

**ಪ್ರಸ್ತಾವನೆ:**

ಶ್ರೀ ಎಸ್.ಆರ್. ಕಡಿವಾಲ್ ಇವರು ಈ ಹಿಂದೆ ಬಾದಾಮಿ ತಾಲ್ಲೂಕು ಕಛೇರಿಯಲ್ಲಿ ಶಿರಸ್ತೇದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಲಿಂಗಾಪುರ ಗ್ರಾಮದ ಸರ್ವೆ ನಂ. 109/1 ಕ್ಕೆ ಸಂಬಂಧಿಸಿದ ಜಮೀನಿನ ಬಗ್ಗೆ ಕಡತ ನಿರ್ವಹಣೆಯಲ್ಲಿ ಕರ್ತವ್ಯಚ್ಯುತಿ ಎಸಗಿದ ಹಿನ್ನೆಲೆಯಲ್ಲಿ ಸದರಿಯವರನ್ನು ಇಲಾಖಾ ವಿಚಾರಣೆಗೆ ಒಳಪಡಿಸಿ ವಿಚಾರಣೆಯಲ್ಲಿ ಅವರ ಮೇಲೆ ಮಾಡಲಾದ ನಾಲ್ಕು ಆರೋಪಗಳು ಸಾಬೀತಾಗಿರುವ ಹಿನ್ನೆಲೆಯಲ್ಲಿ ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಆದೇಶದಂತೆ ಸಿಸಿಎ ನಿಯಮಾವಳಿ ನಿಯಮ 8(iii) ಅನ್ವಯ ಸದರಿಯವರ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮವಾಗಿ ತಡೆಹಿಡಿದು ಬಾಗಲಕೋಟೆ ಜಿಲ್ಲಾಧಿಕಾರಿಗಳು ದಂಡನೆ ವಿಧಿಸಿರುತ್ತಾರೆ.

ಬಾಗಲಕೋಟೆ ಜಿಲ್ಲಾಧಿಕಾರಿಗಳ ದಿನಾಂಕ: 28.07.2003ರ ಆದೇಶವನ್ನು ಪ್ರಶ್ನಿಸಿ ಶ್ರೀ ಎಸ್.ಆರ್. ಕಡಿವಾಲ್ ಇವರು ಸಿಸಿಎ ನಿಯಮಾವಳಿ ನಿಯಮ 18 ರಡಿಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (2) ರಂತೆ ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಿರುತ್ತಾರೆ.

ಈ ಮೇಲ್ಮನವಿಯನ್ನು ವಿಚಾರಣೆಗೆ ತೆಗೆದುಕೊಂಡು ಮೇಲ್ಮನವಿದಾರರಿಗೆ ಖುದ್ದಾಗಿ ಹಾಜರಾಗಿ ತನ್ನ ಪರ ಸಾಕ್ಷಿ/ ವಾದ ಮಂಡಿಸಲು ಅವಕಾಶ ಕಲ್ಪಿಸಿಕೊಡಲಾಗಿದೆ. ಅದರಂತೆ ಈ ಪ್ರಕರಣವನ್ನು ದಿನಾಂಕ: 21.12.2004, 04.01.2005 ಹಾಗೂ 18.01.2005 ರಂದು ವಿಚಾರಣೆಗೆ ತೆಗೆದುಕೊಳ್ಳಲಾಗಿದೆ. ದಿನಾಂಕ: 18.01.2005ರಂದು ಮೇಲ್ಮನವಿದಾರರು ನ್ಯಾಯಾಲಯದಲ್ಲಿ ಹಾಜರಾಗಿ ಮೌಖಿಕ ಹೇಳಿಕೆಯನ್ನು ನೀಡಿರುತ್ತಾರೆ. ಪ್ರಶ್ನಿತ ಬಾದಾಮಿ ತಾಲ್ಲೂಕಿನ ಲಿಂಗಾಪುರ ಗ್ರಾಮದ ಸ.ನಂ.109/1 ಜಮೀನಿನ ಪರಭಾರೆ ಬಗ್ಗೆ ಇದ್ದ ಕಡತವನ್ನು ನಿರ್ವಹಿಸುವಲ್ಲಿ ಉದ್ದೇಶ ಪೂರ್ವಕವಾಗಿ ತಾನು ಯಾವುದೇ ತಪ್ಪು ಮಾಡಿರುವುದಿಲ್ಲವೆಂದು ತಿಳಿಸಿರುತ್ತಾರೆ. ಅದೂ ಅಲ್ಲದೇ ಸಂಬಂಧಪಟ್ಟ ವಿಷಯನಿರ್ವಾಹಕರು ಮಾಡಿದ ಶಿಫಾರಸ್ಸು/ ವರದಿಯ ಮೇರೆಗೆ ಮಾಡಿರುವುದಾಗಿ ತಿಳಿಸುತ್ತಾ, ಸದರಿ ವಿಷಯ ನಿರ್ವಾಹಕರಿಗೆ ಕಡಿಮೆ ಶಿಕ್ಷೆ/ ದಂಡನೆ ವಿಧಿಸಿದ್ದು, ತನಗೆ ವಿಧಿಸಿದ ದಂಡನೆ ಹೆಚ್ಚಾಗಿರುವುದಾಗಿ ವಾದ ಮಾಡುತ್ತಾ, ಜಿಲ್ಲಾಧಿಕಾರಿಗಳು ವಿಧಿಸಿದ ದಂಡನೆಯನ್ನು ವಜಾ ಮಾಡುವಂತೆ ಕೋರಿರುತ್ತಾರೆ. ಮೇಲ್ಮನವಿದಾರರ ಹೇಳಿಕೆಯ ನಂತರ ಈ ಪ್ರಕರಣವನ್ನು ಆದೇಶಕ್ಕಾಗಿ ಕಾಯ್ದಿರಿಸಲಾಯಿತು.

ಪ್ರಕರಣಕ್ಕೆ ಸಂಬಂಧಪಟ್ಟ ಮೂಲ ಕಡತ ಹಾಗೂ ಕಂಡಿಕೆವಾರು ಷರಾಗಳನ್ನು ಬಾಗಲಕೋಟೆ ಜಿಲ್ಲಾಧಿಕಾರಿಗಳ ಕಛೇರಿಯಿಂದ ಪಡೆಯಲಾಗಿದೆ. ವಿಚಾರಣೆಯ ವೇಳೆಯಲ್ಲಿ ನೀಡಿದ ಹೇಳಿಕೆ ಮತ್ತು ಮೇಲ್ಮನವಿಯಲ್ಲಿ ಎತ್ತಿರುವ ಅಂಶಗಳನ್ನು ಪರಿಶೀಲಿಸಲಾಗಿದೆ. ಮೇಲ್ಮನವಿದಾರರು ತಮ್ಮ ಕರ್ತವ್ಯಗಳನ್ನು ನಿರ್ವಹಿಸುವಾಗ ಅವರ ಶಾಖೆಯ ಸಿಬ್ಬಂದಿಗಳು ಕಡತಗಳನ್ನು ಸರಿಯಾಗಿ ನಿರ್ವಹಿಸಿದ ಬಗ್ಗೆ ಪರಿಶೀಲನೆ ಮಾಡಿದ ನಂತರ ಸೂಕ್ತ ಸಲಹೆ/ ಶಿಫಾರಸ್ಸುಗಳೊಂದಿಗೆ ಮೇಲಾಧಿಕಾರಿಗಳಿಗೆ ಕಳುಹಿಸುವುದು ಆದ್ಯ ಕರ್ತವ್ಯವಾಗಿರುತ್ತದೆ. ಆದರೆ, ಈ ಪ್ರಕರಣದಲ್ಲಿ ಮೇಲ್ಮನವಿದಾರರು ಕಾಳಜಿ ವಹಿಸದೇ ಇರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಆದುದರಿಂದ ಅವರ ಹೇಳಿಕೆಯನ್ನು ಒಪ್ಪಲು ಸಾಧ್ಯವಿಲ್ಲ. ಆದ್ದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 490 ಬಿಎಂಎಂ 2004, ಬೆಂಗಳೂರು, ದಿನಾಂಕ: 28ನೇ ಜನವರಿ, 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಬಾಗಲಕೋಟೆ ಜಿಲ್ಲಾಧಿಕಾರಿಗಳು ದಿನಾಂಕ: 28.07.2003ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಎತ್ತಿಹಿಡಿದು ಮೇಲ್ಮನವಿದಾರರ ಮೇಲ್ಮನವಿಯನ್ನು ವಜಾಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಬಿ. ಗಣಾಚಾರಿ**
ಪಿ.ಆರ್.179 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-1).